# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ

## ನಿತ್ಯಪೂಜೆ, ದರ್ಶನಾದಿಗಳ ಕಾರ್ಯಕ್ರಮ,

## 1—11—81 ರಿಂದ 28—2—82 ವರೆಗೆ

### ಶನಿ, ಭಾನು, ಸೋಮ ಮತ್ತು ಮಂಗಳವಾರಗಳಲ್ಲಿ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೆಯ ಗಂಟೆ ಬಲಿ ಮತ್ತು ಶಾತ್ತುಮೊರೆ
,, 6–00 ರಿಂದ 12–00 ವರೆಗೆ ಸರ್ವದರ್ಶನ
ಮಧ್ಯಾಹ್ನ 12–00 ರಿಂದ 1–00 ವರೆಗೆ ಶುದ್ಧಿ ಎರಡನೇ ಅರ್ಚನೆ, (ಏಕಾಂತ)
,, 1–00 ರಿಂದ 7–00 ವರೆಗೆ ಸರ್ವದರ್ಶನ
,, 7–00 ರಿಂದ 8–00 ವರೆಗೆ ಶುದಿ, ರಾತ್ರಿ ಕೈಂಕರ್ಯ
ರಾತ್ರಿ 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ

### ಗುರುವಾರ, ತಿರುಪ್ಪಾವಡ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ
,, 4–30 ರಿಂದ 4–45 ವರೆಗೆ ಕೊಲುವು ಮತ್ತು ಪಂಚಾಂಗ ಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಳ್ಳಿಂಪು, 2 ನೇ ಅರ್ಚನೆ (ಏಕಾಂತ), ತಿರುಪ್ಪಾವಡ ಅಲಂಕರಣ, ಗಂಟೆ ಇತ್ಯಾದಿ
,, 8–00 ರಿಂದ ಸಂಜೆ 6–00 ವರೆಗೆ ಸರ್ವದರ್ಶನ
ಸಂಜೆ 6–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
ರಾತ್ರಿ 8–00 ರಿಂದ 10–00 ವರೆಗೆ ಪೂಲಂಗಿ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ

### ಬುಧವಾರ, ಸಹಸ್ರ ಕಲಶಾಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/ ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 3–45 ವರೆಗೆ ಶುದ್ಧಿ ಇತ್ಯಾದಿ
,, 3–45 ರಿಂದ 4–30 ವರೆಗೆ ತೋಮಾಲಸೇವೆ (ಏಕಾಂತ)
,, 4–30 ರಿಂದ 4–45 ವರೆಗೆ ಕೊಲುವು, ಪಂಚಾಂಗಶ್ರವಣ
,, 4–45 ರಿಂದ 5–30 ವರೆಗೆ ಮೊದಲನೆಯ ಅರ್ಚನೆ
,, 5–30 ರಿಂದ 6–00 ವರೆಗೆ ಮೊದಲನೇ ಗಂಟೆ, ಬಲಿ, ಶಾತ್ತುಮೊರೆ
,, 6–00 ರಿಂದ 8–00 ವರೆಗೆ ಸಹಸ್ರ ಕಲಶಾಭಿಷೇಕ (ಅರ್ಜಿತ) ಶುದ್ಧಿ 2ನೇ ಅರ್ಚನೆ
,, 8–00 ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ರಿಂದ ಏಕಾಂತಸೇವೆ (ಅರ್ಜಿತ)

### ಶುಕ್ರವಾರ, ಅಭಿಷೇಕ

ಉದಯ 3–00 ರಿಂದ 3–30 ವರೆಗೆ ಸುಪ್ರಭಾತ (25/- ರೂ ಟಿಕೆಟ್ ಪಡೆದವರಿಗೆ ಮಾತ್ರ)
,, 3–30 ರಿಂದ 5–00 ವರೆಗೆ ಸಳ್ಳಿಂಪು ಮತ್ತು ನಿತ್ಯ ಕೈಂಕರ್ಯಗಳು
,, 5–00 ರಿಂದ 7–00 ವರೆಗೆ ಅಭಿಷೇಕ (ಅರ್ಜಿತ)
,, 7–00 ರಿಂದ 8–30 ವರೆಗೆ ಸಮರ್ಪಣೆ
,, 8–30 ರಿಂದ 9–30 ವರೆಗೆ ತೋಮಾಲಸೇವೆ ಮತ್ತು ಅರ್ಚನೆ, ಬಲಿ, ಶಾತ್ತುಮೊರೆ
,, 9–30 ರಿಂದ 10–00 ವರೆಗೆ ಬಲಿ, ಶಾತ್ತುಮೊರೆ
,, 10–00 ರಿಂದ ರಾತ್ರಿ 7–00 ವರೆಗೆ ಸರ್ವದರ್ಶನ
ರಾತ್ರಿ 7–00 ರಿಂದ 8–00 ವರೆಗೆ ಶುದ್ಧಿ ಇತ್ಯಾದಿ
,, 8–00 ರಿಂದ 10–00 ವರೆಗೆ ಸರ್ವದರ್ಶನ
,, 10–00 ರಿಂದ 10–30 ವರೆಗೆ ಶುದ್ಧಿ
10–30 ಏಕಾಂತಸೇವೆ

---

ಗಮನಿಕೆ :— 1. ಮೇಲಿನ ಕಾರ್ಯಕ್ರಮಗಳು ಸಮಯಾನುಕೂಲವಾಗಿಯೂ ಪ್ರತ್ಯೇಕ ಕಾರ್ಯಕ್ರಮಗಳಿಂದಲೂ ಬದಲಾಯಿಸಲ್ಪಡಬಹುದು

2. ತೋಮಾಲಸೇವೆಯಲ್ಲಿ ಒಬ್ಬರಿಗೆ 50/— ರೂ ಟಿಕೆಟ್, ಅರ್ಚನೆಯಲ್ಲಿ ಒಬ್ಬರಿಗೆ 100/— ರೂ ಟಿಕೆಟ್ ಏಕಾಂತಸೇವೆಯಲ್ಲಿ ಒಬ್ಬರಿಗೆ 50/— ರೂ ಟಿಕೆಟ್, ಪಡೆದಲ್ಲಿ ಪ್ರವೇಶಾವಕಾಶವುಂಟು.

3. ಸರ್ಕಾರ್ ಕಲ್ಯಾಣೋತ್ಸವ, ಅರ್ಜಿತ ಬ್ರಹ್ಮೋತ್ಸವ, ಊಂಜಲ್‌ಸೇವೆ, ವಾಹನ ಸೇವೆಗಳು, ಡೋಲೋತ್ಸವ, ಪ್ಲವೋತ್ಸವ ಮಂಗಳವಾರದಲ್ಲಿ ಮಧ್ಯಾಹ್ನ 1–00 ರಿಂದ 7–00 ನಡುವೆ ಜರುಗುವುವು.



ದಾಸನ ಮಾಡಿಕೊ ಎನ್ನ ಸ್ವಾಮಿ
ಸಾಸಿರ ನಾಮದ ವೆಂಕಟರಮಣ

ದುರುಳ ಬುದ್ಧಿಗಳನೆಲ್ಲ ಬಿಡಿಸೊ ನಿನ್ನ
ಕರುಣಕವಚವೆನ್ನ ಹರಣಕೆ ತೊಡಿಸೊ
ಚರಣಸೇವೆಯೆನಗೆ ಕೊಡಿಸೊ ಅಭಯ
ಕರ ಪುಷ್ಪವೆನೆನ್ನ ಶಿರದಲ್ಲಿ ಮುಡಿಸೊ

ದೃಢಭಕ್ತಿ ನಿನ್ನಲ್ಲಿ ಬೇಡಿ ನಾ
ನಡಿಗೆರಗುವೆನಯ್ಯ ಅನುದಿನ ಪಾಡಿ
ಕಡೆಗಣ್ಣಲೇಕೆನ್ನ ನೋಡಿ ಬಿಡುವೆ
ಕೊಡು ನಿನ್ನ ಧ್ಯಾನವ ಮನ ಶುಚಿಮಾಡಿ

ಮೊರೆ ಹೊಕ್ಕವರ ಕಾವ ಬಿರುದು ಎನ್ನ
ಮರೆಯದೆ ರಕ್ಷಣೆ ಮಾಡಯ್ಯ ಪೊರೆದು
ದುರಿತಗಳನೆಲ್ಲ ತರಿದು ಸಿರಿ
ಪುರಂದರ ವಿಠಲ ಎನ್ನನು ಪೊರೆದು

—ಪುರಂದರದಾಸರು



ಗೌರವ ಸಂಪಾದಕರು:
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಐ.ಎ.ಎಸ್.,

ಸಂಪಾದಕ
ಕೆ. ಸುಬ್ಬಾರಾವ್ವು, ಎಂ.ಎ.,

ಉಪಸಂಪಾದಕ:
ಬಿ. ಎಸ್. ಶ್ರೀನಿವಾಸನ್ ಎಂ.ಎ ,

ಮುದ್ರಣ.
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ ಪ್ರೆಸ್ ಕಾಂಪೌಂಡ್
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ-ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ

**ಸಂಪುಟ 12] ಸಪ್ತಗಿರಿ ಜನವರಿ 1982 [ಸಂಚಿಕೆ 8**

# ವಿಷಯಸೂಚಿ

# ವಾರ್ತಾವಳಿ



## ಅನ್ನಮಾಚಾರ್ಯ ಪ್ರತಿಮೆಯ ಅನಾವರಣ

## ತಿರುಪತಿಯಲ್ಲಿ ಶ್ರೀ ರಾಮಕೃಷ್ಣ ಸೇವಾಸಮಿತಿ

ತಿರುಪತಿ ಕಪಿಲತೀರ್ಥ ರಸ್ತೆಯ ಗೀತಾ ಮಂದಿರದಲ್ಲಿ ಶ್ರೀ ರಾಮಕೃಷ್ಣ ಸೇವಾಸಮಿತಿಯನ್ನು ದಿನಾಂಕ 11 ನವಂಬರ್ ರಂದು ಹೈದರಾಬಾದಿನ ಶ್ರೀ ರಾಮಕೃಷ್ಣ ಮಠದ ಸ್ವಾಮಿ ಶ್ರೀರಂಗನಾಥಾನಂದ ಅವರು ಉದ್ಘಾಟಿಸಿದರು.

ಉದ್ಘಾಟನಾ ಭಾಷಣ ಮಾಡುತ್ತ ಸ್ವಾಮಿಗಳು ಇಂದಿನ ಯುಗಕ್ಕೆ ಅಗತ್ಯವಾದದ್ದು 'ಬುದ್ಧನ ಹೃದಯ ಹಾಗೂ ಶಂಕರರ ಚಿಂತನೆ' ಎಂದು ಹೇಳುತ್ತ ಗೀತೆ ವೇದಗಳ ಬಗ್ಗೆ ಮಾತನಾಡಿ ಸೇವಾಸಮಿತಿಯು ಈ ಅಂಶಗಳನ್ನು ಹರಡುವಲ್ಲಿ ಹೆಚ್ಚು ಸಫಲವಾಗಲಿ ಎಂದು ಹಾರೈಸಿದರು.

ಸ್ವಾಮಿಗಳು ಅದೇ ಸಮಯದಲ್ಲಿ ಸೇವಾಸಮಿತಿಯಲ್ಲಿ ವಿವೇಕಾನಂದ, ರಾಮಕೃಷ್ಣ ಪರಮಹಂಸ, ಶಾರದಾಮಾತೆಯವರ ತೈಲ ಚಿತ್ರಗಳ ಅನಾವರಣ ಮಾಡಿದರು.

ಸಭೆಯ ಅಧ್ಯಕ್ಷತೆ ವಹಿಸಿದ್ದ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ಸುತ್ತ ಹೆಚ್ಚುತ್ತಿರುವ ಧಾರ್ಮಿಕ ಸಾಂಸ್ಕೃತಿಕ ಚಟುವಟಿಕೆಗಳ ಬಗ್ಗೆ ತಮ್ಮ ಮೆಚ್ಚುಗೆ ವ್ಯಕ್ತಪಡಿಸಿ ಸೇವಾಸಮಿತಿ ಯಶಸ್ವಿಯಾಗಿ ರಾಮಕೃಷ್ಣರ ಸಂದೇಶವನ್ನು ಜನತೆಗೆ ನೀಡುವಂತಾಗಲಿ ಎಂದು ಹಾರೈಸಿದರು.

ಸೇವಾಸಮಿತಿಯ ಕಾರ್ಯದರ್ಶಿ ಶ್ರೀ ಚಂದ್ರಮೌಳಿ ಅವರು ಸಭೆಯನ್ನು ವಂದಿಸಿದರು.

ಕಡಪ ನಗರದ ಕೇಂದ್ರ ಸ್ಥಳದಲ್ಲಿ ಆ ಜಿಲ್ಲೆಯಲ್ಲಿ ಹುಟ್ಟಿ ಬೆಳೆದವರೂ ಶ್ರೀ ವೆಂಕಟೇಶ್ವರಸ್ವಾಮಿಯ ಪರಮ ಭಕ್ತ ಶಿರೋಮಣಿಗಳೂ ಆದ ತಾಳ್ಳಪಾಕ ಅನ್ನಮಾಚಾರ್ಯರ ಕರಿಕಲ್ಲಿನ ಪೂರ್ಣಪ್ರಮಾಣದ ಸುಂದರ ವಿಗ್ರಹದ ಅನಾವರಣವನ್ನು ಆಂಧ್ರಪ್ರದೇಶದ ಮುಖ್ಯಮಂತ್ರಿ ಅಂಜಯ್ಯನವರು 29-11-81 ರಂದು ಕಡಪ ನಗರದ ಮುನಿಸಿಪಲ್ ಛೇರ್ಮನ್ ಶ್ರೀ ಅಜಮತುಲ್ಲಾ ಅವರ ಅಧ್ಯಕ್ಷತೆಯಲ್ಲಿ ನೆರವೇರಿಸಿದರು. ಅನಾವರಣ ಸಮಯದಲ್ಲಿ ಮಾತನಾಡುತ್ತ ಮುಖ್ಯಮಂತ್ರಿಗಳು ಆಂಧ್ರಪ್ರದೇಶ ಸರ್ಕಾರವು ಅನ್ನಮಯ್ಯ ಸಂಗೀತ ವಿಶ್ವವಿದ್ಯಾನಿಲಯವನ್ನು ಸ್ಥಾಪಿಸಿ ಸಂಗೀತ ಪ್ರಸಾರ ಮಾಡುವ ಯೋಜನ ಮಾಡುತ್ತಿದೆ ಎಂದು ನುಡಿದರು.

ಅನಾವರಣ ಕಾರ್ಯಕ್ರಮದಲ್ಲಿ ತಿ. ತಿ. ದೇವಸ್ಥಾನಗಳ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ.ವಿ.ಆರ್.ಕೆ. ಪ್ರಸಾದ್, ಅನ್ನಮಾಚಾರ್ಯ ಪ್ರಾಜೆಕ್ಟ್‌ನ ವಿಶೇಷಾಧಿಕಾರಿ ಶ್ರೀ ಕಾಮಿಶೆಟ್ಟಿ ಶ್ರೀನಿವಾಸುಲು ಶೆಟ್ಟಿ ಮುಂತಾದವರು ಹಾಜರಿದ್ದರು.

## ಹಿಂದೂ ಧರ್ಮ ಶಿಕ್ಷಣ ಶಾಲೆ

ಈಚೆಗೆ ತಿರುಪತಿಯ ಕಪಿಲತೀರ್ಥದ ಬಳಿಯಲ್ಲಿ ಕಪಿಲೇಶ್ವರಸ್ವಾಮಿ ದೇವಸ್ಥಾನದ ಹೆಬ್ಬಾಗಿಲಿನ ವೃತ್ತದಲ್ಲಿ ಮುಖ್ಯಮಂತ್ರಿ ಅಂಜಯ್ಯನವರು ಅನಾವರಣಗೊಳಿಸಿದ ಬೃಹತ್ ನಂದಿ ವಿಗ್ರಹ.

ಚಿನ್ಮಯ ಮಿಷನ್ ಹಾಗೂ ತಿ.ತಿ.ದೇವಸ್ಥಾನಗಳ ಸಂಯುಕ್ತ ಆಶ್ರಯದಲ್ಲಿ ತಿರುಪತಿಯಲ್ಲಿ ನಿರುದ್ಯೋಗಿ ಪದವೀಧರರಿಗಾಗಿ ಹಿಂದೂ ಧರ್ಮ ಶಿಕ್ಷಣ ಶಾಲೆಯು ದಿನಾಂಕ 25-11-81 ರಂದು ಆರಂಭವಾಯಿತು.

130 ಜನದ ಈ ಶಾಲೆಯು ಮೂರು ತಿಂಗಳಿನ ಅವಧಿಯದಿದ್ದು ಇಲ್ಲಿ ಹಿಂದೂ ಧರ್ಮಕ್ಕೆ ಸಂಬಂಧಿಸಿದ ವೇದ ಶಾಸ್ತ್ರ ಪುರಾಣ ಇತಿಹಾಸ ಸಾಹಿತ್ಯಗಳ ಪರಿಚಯವನ್ನು ಶಿಕ್ಷಣಾರ್ಥಿಗಳಿಗೆ ನೀಡಲಾಗುವುದು. ಈ ಶಾಲೆಯ ಉದ್ಘಾಟನೆಯಲ್ಲಿ ಸಮುದ್ರಾಲ ಲಕ್ಷ್ಮಣಯ್ಯ ಅವರು ಅನುವಾದಿಸಿದ ಭರ್ತೃಹರಿಯ ನೀತಿಶತಕವನ್ನು ಬಿಡುಗಡೆ ಮಾಡಿದ 'ಕುಲಪತಿ ಎಕ್ಕಿರಾಲ' ಅವರು ಹಿಂದೂ ಧರ್ಮದ ಹಿರಿಮೆಯನ್ನು ನಮ್ಮ ಯುವಜನತೆ ತಿಳಿದು ನಡೆಯುವುದರಲ್ಲೇ ದೇಶದ ಅಭಿವೃದ್ಧಿಯು, ಶಾಂತಿಯು ರಹಸ್ಯವಿದೆ ಎಂದು ನುಡಿದರು. ಅಧ್ಯಕ್ಷತೆ ವಹಿಸಿದ್ದ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ಮಾತನಾಡುತ್ತ ಶ್ರೀ ಎಕ್ಕಿರಾಲ ಅವರು ಹಿಂದೂ ಧಾರ್ಮಿಕ ನೈತಿಕ ಮೌಲ್ಯ ಪ್ರಸಾರಣದಲ್ಲಿ ಮಾಡುತ್ತಿರುವ ಘನವಾದ ಕಾರ್ಯವನ್ನು ಪ್ರಶಂಸಿಸಿ. ಈ ಶಿಕ್ಷಣ ಶಾಲೆಯು ಅವರ ಸಲಹೆ ಸೂಚನೆಗಳಿಗನುಗುಣವಾಗಿ ನಡೆದು ಯುವಜನತೆಯಲ್ಲಿ ಧಾರ್ಮಿಕ ಪ್ರಜ್ಞೆ ಬೆಳೆಸುವುದರಲ್ಲಿ ಸಹಾಯಕವಾಗಲಿ ಎಂದು ಹಾರೈಸಿದರು.

ಆರಂಭದಲ್ಲಿ ತಿ. ತಿ. ದೇ. ಹಿಂದೂ ಧರ್ಮರಕ್ಷಣ ಸಂಸ್ಥೆಯ ಕಾರ್ಯದರ್ಶಿ ಡಾ|| ಅರ್ಕಸೋಮಯಾಜಿ ಅವರು ಸ್ವಾಗತಿಸಿದ ಉದ್ಘಾಟನಾ ಸಭೆಯನ್ನು ಚಿನ್ಮಯಾನಂದ ಮಿಷನ್‌ನ ತಿರುಪತಿ ಶಾಖೆಯ ಕಾರ್ಯದರ್ಶಿ ಶ್ರೀ ಬಲರಾಮರೆಡ್ಡಿಯವರು ವಂದಿಸಿದರು.

ಮೂರುತಿಂಗಳ ಈ ಶಾಲೆಯು ಚಿನ್ಮಯ ಮಿಷನ್‌ನ ಸ್ವಾಮಿನಿ ಶಾರದಾ ಪ್ರಿಯಾನಂದ ಅವರ ನೇತೃತ್ವದಲ್ಲಿ ನಡೆಯುತ್ತಿದೆ.

★

ಈಚೆಗೆ ತಿರುಚಾನೂರಿನಲ್ಲಿ ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವಗಳು ವಿಶೇಷ ಜನಾಕರ್ಷಕವಾಗಿ, ನೇತ್ರಾನಂದಕರವಾಗಿ ನಡೆದವು. ತತ್ಸಂಬಂಧದಲ್ಲಿ ತೆಗೆದ ಅಮ್ಮನವರ ಗರುಡವಾಹನದ ಹಾಗೂ ಚಕ್ರಸ್ನಾನದ ಚಿತ್ರಗಳು.





ಕಿರಾತಾರ್ಜುನೀಯ ಪ್ರಸಂಗದ ವಿವರಗಳ ಸುಂದರ ಕೆತ್ತನೆಯ ಧ್ವಜಸ್ತಂಭ.

## ಕನ್ನಡಭಾರತದ ಕಿರಾತಾರ್ಜುನೀಯ

ಏಕೆ ಚಿಂತೆ ವೃಥಾ ಮನೋವ್ಯಥ
ಕಾಕಲಾ ಸಾಪಜ್ಞನಾಗೆ ಸಿ
ನಾಕಿ ಮಾಡುವುದೇನು ಮರೆಯೊಗುವೆನು ಮಹೇಶ್ವರನ
ಈ ಕಿರಾತನ ಹರಿಬವನು ಬಳಿ
ಕೇಕೆ ನಿಮಿಷಕೆ ಗೆಲುವೆನೆನುತ ವಿ
ವೇಕ ಸಿರಿಯ ಕಟಾಕ್ಷ ಚಿತ್ತಕೆ ಮೂರಿದನು ಮನವ

ಮಣಲ ಲಿಂಗವ ಮಾಡಿದನು ನಿ
ರ್ಗುಣನ ಸಗುಣಾರಾಧನೆಯ ಮ
ನ್ನಣೆಗಳಲಿ ವಿಸ್ತರಿಸಿದನು ವಿವಿಧಾಗಮೋಕ್ತದಲಿ
ಕಣಗಿಲೆಯ ಬಂದುಗೆಯ ಕಕ್ಕೆಯ
ನಣಬಸರಿಸದ ಕುಸುಮದಲಿ ರಿಪು
ಗಣ ಭಯಂಕರನರ್ಚಿಸಿದನಂಧಾಸುರಾಂತಕನ

ಕಂಡನರ್ಜುನನೀ ಕಿರಾತನ
ಮಂಡೆಯಲಿ ತಾ ಮಣಲ ಲಿಂಗದ
ಮಂಡೆಯಲಿ ಪೂಜಿಸಿದ ಬಹುವಿಧ ಕುಸುಮ ಮಂಜರಿಯ
ಕಂಡನಿತ್ತಲು ಮುರಿದು ಪುನರಪಿ
ಕಂಡನೀ ಶಬರಂಗಿದೆತ್ತಣ
ದಂಡಿಯೋ ಹಾಯೆನುತ ಸ್ತೈವೆರಗಾದನಾ ಪಾರ್ಥ

— ಕುಮಾರವ್ಯಾಸ

ನಮ್ಮ ನಾಡಿನ [illegible] ವಿಭೂತಿಪುರುಷರಾದ ಮಧ್ವಾಚಾರ್ಯರು ಈ ದೇಗುಲಕ್ಕೆ ಭೇಟಿಯಿತ್ತಿದ್ದರೆಂಬುದೊಂದು ಅಪೂರ್ವ ಸಂಗತಿ. ಸವಿ[illegible] ಕಾಣಿಯೂರು' ಮಠದಲ್ಲಿ ತಂಗಿದ್ದ ಆಚಾರ್ಯರು 'ಇಲ್ಲಿ ವೇದಗಳನ್ನು ಅಂಗಸಹಿತ ಕರಗತ ಮಾಡಿಕೊಂಡ ಸುಶ್ರಾವ್ಯವಾಗಿ ಹಾಡಬಲ್ಲ ಬಲ್ಲಿದರಿದ್ದಾರೆ,' ಎಂಬುದನ್ನು ತಿಳಿದು ಸಂತೋಷಪಟ್ಟಿದ್ದರು. ಅವರಿಂದ ವೇದ ಘೋಷ ಮಾಡಿಸಿ ಈ ನೆಲದ ಹಿರಿಮೆಯನ್ನು ಕೊಂಡಾಡಿದ್ದರ ಬಗ್ಗೆ ಮಧ್ವವಿಜಯದಲ್ಲಿ ಉಲ್ಲೇಖವಿದೆ. ಅಂದರೆ ಕ್ರಿ.ಶ. 1350 ರ ಹೊತ್ತಿಗೆ ಈ ದೇವಾಲಯ ಉಚ್ಛ್ರಾಯ ಸ್ಥಿತಿಯಲ್ಲಿದ್ದಿತೆಂದು ಹೇಳಬಹುದಾಗಿದೆ.

ಈ ದೇವಾಲಯದ ಆವರಣ [illegible] ಕೊಡಗಿನ [illegible] ಹೊಡೆದು [illegible] ಅನ್ನು ಪೂಜೆಗಾಗಿ [illegible] ಟಿಪ್ಪು ಸುಲ್ತಾನ [illegible] ನಲ್ಲಿ [illegible] ಭೂತದ [illegible] ಬಗ್ಗೆ ಉಲ್ಲೇಖವಿದೆ. [illegible] ಮಾಡುತ್ತಾರೆ [illegible] ಪಂಡಿತ [illegible] ವರು ಇಲ್ಲಿನ ಉತ್ಸವಾದಿಗಳ ನೇತೃತ್ವ ವಹಿಸುತ್ತಾರೆ.

ಮಕರ ಸಂಕ್ರಾಂತಿ, ಶಿವರಾತ್ರಿಗಳಂದು ಇಲ್ಲಿ ವಿಶೇಷ ಪೂಜೆ, ಉತ್ಸವ ನಡೆಯುತ್ತವೆ. ಮಾರ್ಚ್ ತಿಂಗಳ ಮಧ್ಯಭಾಗದಲ್ಲಿ (ಫಾಲ್ಗುಣಮಾಸ) ವಿಶೇಷ ಉತ್ಸವಗಳು ಎಂದರೆ ಅವಭೃತ, ದರ್ಶನಪೂಜೆ ಮುಂತಾದವು ನಡೆಯುತ್ತವೆ.

ಕೇರಳದ ಕಾಸರಗೋಡು ತಾಲ್ಲೂಕಿಗೆ ಸೇರಿದ ಅಡೂರಿಗೆ ಸುಳ್ಯ ಮಂಗಳೂರು, ಪುತ್ತೂರಿನಿಂದ ನೇರ ಬಸ್ ಸೌಲಭ್ಯವಿದೆ. ಇಲ್ಲಿ ಒಮ್ಮೆ ಭೇಟಿಯಿತ್ತರೆ ಒಂದು ತಪೋವನಕ್ಕೆ ಹೋದಂತಾದೀತು. ಸುತ್ತಲಿನ ವನರಾಜಿ, ಭೂಗರ್ಭ ರಹಸ್ಯಗಳೆನ್ನಬಹುದಾದ ನಟ್ಟಣೆಗೆ, ನೆಲ್ಲಿತಟ್ಟು ಗುಹೆಗಳು ನೋಡಲರ್ಹವೆನಿಸಿವೆ.

★

# ಶ್ರೀನಿವಾಸ ದಯಾ ಪ್ರಭಾವ

**" ನಿರ್ಮಲಾಪ್ರಿಯ "**

ಆಚಾರ್ಯ ರಾಮಾನುಜರು ಶ್ರೀಭಾಷ್ಯದಲ್ಲಿ "ದಯಾ" ಶಬ್ದಕ್ಕೆ "ದಯಾ ನಾಮ ಸ್ವಾರ್ಥನಿರಪೇಕ್ಷಾ ಪರದುಃಖ ಅಸಹಿಷ್ಣುತಾ" ಎಂದು ವ್ಯಾಖ್ಯಾನಿಸಿದ್ದಾರೆ. ದಯ ಎಂಬುದು ಪರಮಾತ್ಮನ ಗುಣ ವಿಶೇಷ. ಸಕಲ ಕಲ್ಯಾಣಗುಣಿಯಾದ ಪರಮಾತ್ಮನಿಗಿಂತಲೂ ಅವನ ಗುಣಗಳಲ್ಲಿ ಒಂದಾದ ದಯೆಗೆ ಹೆಚ್ಚಿನ ಪ್ರಾಧಾನ್ಯವುಂಟು. ಸ್ವಾಮಿ ದೇಶಿಕರು ರಚಿಸಿರುವ ದಯಾ ಶತಕವು ಗುಣಪ್ರಧಾನವಾದ ಸ್ತೋತ್ರ. ಹಾಗೆಂದ ಮಾತ್ರಕ್ಕೆ ಗುಣಿಯಾದ ಪರಮಾತ್ಮನ ವೈಭವಕ್ಕೆ ನ್ಯೂನತೆಯೇನಿಲ್ಲ. ಇನ್ನೂ ಉತ್ಕರ್ಷವೇ ಉಂಟು. ಶ್ರುತಿಯಲ್ಲಿ ಕೂಡ "ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ" ಎಂದಿದೆ. 'ಸಹ' ಶಬ್ದದಿಂದ, ಗುಣದ ಪ್ರಾಧಾನ್ಯ ಹೇಳಲ್ಪಟ್ಟಿದೆ. ಸಾಧನ ದಶೆಯಲ್ಲಿಯೂ ಶ್ರೀಮದಾಚಾರ್ಯರು ಗುಣವನ್ನು ಎತ್ತಿ ಹೇಳಿದ್ದಾರೆ. ಅಭೀತಿಸ್ತವದಲ್ಲಿ "ಗುಣಂ ಕಮಪಿ ವೇತ್ತಿ ವಾ ತವ ಗುಣೇಷು ಗೋಪಾಯಿತುಃ ಕದಾಚನ ಕುತಶ್ಚನ ಕ್ವಚನ ತಸ್ಯ ನ ಸ್ಯಾದ್ಭಯಂ ||" ಎಂದಿದ್ದಾರೆ. ಪರಮಾತ್ಮನು ಷಡ್ಗುಣ ಸಂಪನ್ನನೆಂದು ಪ್ರಸಿದ್ಧವಾಗಿದೆ. ಗುಣಗಳಲ್ಲಿ ನ್ಯೂನಾಧಿಕ ಭಾವವುಂಟೆ ಎಂಬ ಪ್ರಶ್ನೆ ಸಹಜವಾಗಿ ಉದಯಿಸುತ್ತದೆ. ಭಗವಂತನ ಭಗವತ್ವಕ್ಕೆ ಆರುಗುಣಗಳೂ ಪರಿಪೂರ್ಣವಾಗಿರಬೇಕು. ಹಾಗಿದ್ದರೂ ದಯಾಗುಣಕ್ಕೆ ಹೆಚ್ಚಿನ ಪ್ರಾಶಸ್ತ್ಯ ಉಂಟು. ಶ್ರೀರಾಮಾಯಣದಲ್ಲಿ "ಆನೃಶಂಸಸ್ಯ ಅನುಕ್ರೋಶಃ ಶ್ರುತಂ ಶೀಲಂ ದಮಃ ಶಮಃ| ರಾಘವಂ ಶೋಭಯಂತ್ಯೇತೇ ಷಡ್ಗುಣಾ ಪುರುಷೋತ್ತಮಂ||" ಎಂಬಲ್ಲಿ ದಯೆಯನ್ನು ಮೊದಲು ಹೇಳಲಾಗಿದೆ. ಸೀತೆಯೂ ಶ್ರೀರಾಮನ ದಯಾಗುಣವನ್ನೇ ಹೆಚ್ಚಾಗಿ ಕೊಂಡಾಡುತ್ತಾಳೆ. ಶ್ರೀ ದೇಶಿಕರು ಶ್ರೀನಿವಾಸನ ದಯೆಯನ್ನು "ಗುಣೇಷು ಸಾರ್ವಭೌಮೀ" ಎಂದು ಉಲ್ಲೇಖಿಸಿದ್ದಾರೆ. ಶರಣಾಗತರನ್ನು ರಕ್ಷಿಸುವುದರಲ್ಲಿ ದಯಾಗುಣವೇ ಪ್ರಧಾನವಾದದ್ದು. ಉಪನಿಷತ್ತಿನಲ್ಲಿ "ಭೀಷಾಸ್ಮಾದ್ವಾತಃ ಪವತೆ" ಇತ್ಯಾದಿ ವಾಕ್ಯಗಳಲ್ಲಿ ಪರಮಾತ್ಮನ ದಯಾಗುಣ ಸುವ್ಯಕ್ತ. ಪರಮಾತ್ಮನ ಈ ದಯಾಗುಣ ಸ್ವಾತಂತ್ರ್ಯವುಳ್ಳದ್ದು. ಪರಮಾತ್ಮನು ಕೂಡ ದಯಾ ಪರತಂತ್ರ. ಸರ್ವಶೇಷಿಯಾಗಿದ್ದರೂ ದಯೆಗೆ ಶೇಷನಾಗಿದ್ದಾನೆ, ನಾವು ಅಪರಾಧ ಚಕ್ರವರ್ತಿಗಳಾಗಿದ್ದರೂ ಶೋಕಿಸಬೇಕಾಗಿಲ್ಲ. ಆತ್ಮಭರ ಸಮರ್ಪಣೆ ಮಾಡಿದರೆ, ದಯಾದೇವಿ ನಮ್ಮನ್ನು ಅಂಗೀಕರಿಸುತ್ತಾಳೆ. 'ನಕಶ್ಚಿನ್ನಾಪರಾಧ್ಯತಿ' ಎಂದಿರುವ ವರನು ವತ್ಸಲಳಾದ ಲೋಕಮಾತೆಯು ಭಕ್ತರ ಶರಣಾಗತಿಯನ್ನು ತಿರಸ್ಕರಿಸುವುದಿಲ್ಲ. ಭೀಷ್ಮರು ಕೂಡ ಸಹಸ್ರನಾಮ ಸ್ತೋತ್ರದಲ್ಲಿ "ಸುಪ್ರಸಾದಃ, ಪ್ರಸನ್ನಾತ್ಮಾ, ಸುಹೃತ್, ವತ್ಸಲಃ, ವತ್ಸೀ, ಲೋಕ ಬಂಧುಃ, ಕ್ರೋಧಹಾ, ಸುಲಭಃ, ಭಯ ನಾಶನಃ, ಪ್ರಿಯಕೃತ್, ಅಕ್ರೂರಃ, ಶರಣಾಗತ ವತ್ಸಲಃ" ಎಂದು ಅನೇಕ ಕಡೆಗಳಲ್ಲಿ ದಯಾಗುಣವನ್ನು ಕೊಂಡಾಡಿದ್ದಾರೆ. ಬ್ರಹ್ಮಸೂತ್ರದ ಆನಂದಮಯಾಧಿಕರಣದಲ್ಲಿ ಪರಮಾತ್ಮನು ಆನಂದಮಯನು, "ಏಷಹ್ಯೇವಾನಂದಯಾತಿ" ಎಂದು ಸ್ಥಾಪಿಸಲಾಗಿದೆ. ಪರಮಾತ್ಮನು ಪರಿಪೂರ್ಣಾನಂದಮಯನಾಗಿರಲು ದಯಾಗುಣವೇ ಮೂಲ ಕಾರಣ. "ದಯಾ ಮಾನಮನಾಃ ವರದ ನಿಜೇಚ್ಛಯೈವ ಪರವಾನ ಕರೋಷಿ" ಎಂಬಲ್ಲಿ 'ನಿಜೇಚ್ಛಯಾ' ಎಂದರೆ "ದಯಯಾ" ಎಂದೇ ಆಚಾರ್ಯರು ಅರ್ಥ ನಿರ್ವಹಿಸಿದ್ದಾರೆ. ಈ ಜಗತ್ ಸೃಷ್ಟಿಗೆ ಪರಮಾತ್ಮನ ದಯೆಯೇ ಕಾರಣ. ಆಚಾರ್ಯ ದೇಶಿಕರು ತಮ್ಮ ದಯಾಶತಕದಲ್ಲಿ ದಯಾದೇವಿಯು ಪರತ್ವಗುಣಗಳನ್ನು ಸ್ತುತಿಸಿದ್ದಾರೆ. ದಯಾಪ್ರವಾಹದಲ್ಲಿ ಶ್ರೀನಿವಾಸನು ಕೂಡ ಮಜ್ಜನ ಗೈಯುತ್ತಾನೆ ಎಂದು ಮತ್ತೊಂದು ಕಡೆ ಹೇಳಿದ್ದಾರೆ. ಶ್ರೀನಿವಾಸನ ದಿವ್ಯ ಮಂಗಳ ವಿಗ್ರಹವು ದಯಾ ಸಮುದ್ರದ ಮೂರ್ತಸ್ವರೂಪ. ಶ್ರೀನಿವಾಸನ ಶ್ರೀ, ಶಕ್ತ್ಯಾದಿಗುಣಗಳು ದಯೆಯ ಅನುಚರರು. ದಯೆ ಜ್ಞಾನಸ್ವರೂಪಳೂ ಹೌದು.

"ತ್ರಿವಿಧ ಚಿದಚಿತ್ಸತ್ತಾ' ಎಂಬ ಶ್ಲೋಕದಲ್ಲಿ ದಯೆಯನ್ನು ಜ್ಞಾನಕ್ಕೆ ಹೋಲಿಸಿದ್ದಾರೆ. ಹೀಗೆ ದಯೆಯೇ ಪರಮಾತ್ಮನ ಎಲ್ಲಾ ಗುಣಗಳಿಗೂ ಆಶ್ರಯವಾಗಿದ್ದಾಳೆ. ಇದನ್ನು ಶ್ರೀ ದೇಶಿಕರು ದಯಾಶತಕದಲ್ಲಿ ಬಹು ಚೆನ್ನಾಗಿ ಹೇಳಿದ್ದಾರೆ.

"ವೃಷಗಿರಿ ಗೃಹ ಮೇಧಿಗುಣಾಃ
ಬೋಧ ಬಲೈಶ್ವರ್ಯ ವೀರ್ಯ
ಶಕ್ತಿ ಗುಣಾಃ |
ದೋಷಾ ಭವೇಯುರೇತೇ ಯದಿ ನಾಮ
ದಯೇ ತ್ವಯಾ ವಿನಾ ಭೂತಾಃ ||

ದಯಾಗುಣ ಒಂದಿಲ್ಲದಿದ್ದರೆ ಪರಮಾತ್ಮನ ಇತರ ಎಲ್ಲಾ ಗುಣಗಳೂ ದೋಷಯುಕ್ತವಾಗುತ್ತಿದ್ದವು. ಇಂತಹ ದಯಾ ಪರಿಪೂರ್ಣನಾದ ಶ್ರೀ ಶ್ರೀನಿವಾಸನು ಎಲ್ಲರಿಗೂ ಸನ್ಮಂಗಳವನ್ನುಂಟುಮಾಡಲಿ.



# ದಾಸಸಾಹಿತ್ಯ

# ಗೋಪಾಲದಾಸರು

ಶ್ರೀ ಜಿ. ಶ್ರೀಧರ್

ಕನ್ನಡ ಸಾಹಿತ್ಯದ ಸಾರವಿದ್ದೈನೂರು ವರ್ಷಗಳ ಸುದೀರ್ಘ ಇತಿಹಾಸದಲ್ಲಿ ಹರಿದಾಸ ಸಾಹಿತ್ಯ ಒಂದು ಪ್ರಮುಖ ಘಟ್ಟ. ಹರಿದಾಸ ಸಾಹಿತ್ಯವನ್ನು ಪೋಷಿಸಿಕೊಂಡು ಬಂದ ದಾಸ ಪರಂಪರೆ ಶ್ರೀಪಾದರಾಜರಿಂದ ಮೊದಲಾಗಿ ಪುರಂದರ ಹಾಗೂ ಕನಕದಾಸರುಗಳಿಂದ ಬಹು ಮಟ್ಟಿಗೆ ಉನ್ನತಿಗೆ ಬಂದು ನಂತರ ಅಜ್ಞಾತಕಾಲಕ್ಕಡಿಯಿರಿಸಿತು. ತದನಂತರ ದ್ವೈತ ಸಿದ್ಧಾಂತದ ಶ್ರೀಮಂತಿಕೆಯಿಂದ ಪುನಃ ಮಂತ್ರಾಲಯ ರಾಘವೇಂದ್ರಸ್ವಾಮಿಗಳ ನೇತೃತ್ವದಲ್ಲಿ ದಾಸಸಾಹಿತ್ಯ ಪುನರ್ ಪ್ರತಿಷ್ಠಾಪನೆಯಾಯಿತು. ಆಗಲೇ ಗೋಪಾಲದಾಸರು, ಜಗನ್ನಾಥದಾಸರು ಮೊದಲಾದವರು ದಾಸಸಾಹಿತ್ಯದ ಮುಖಾಂತರ ಬೆಳಕಿಗೆ ಬಂದರು. ಗುರುರಾಯರ ಪ್ರಭಾವದಿಂದ ಪ್ರಸಿದ್ಧಿಗೆ ಬಂದ ವಿಜಯದಾಸರ ಪ್ರಮುಖ ಶಿಷ್ಯರು ಗೋಪಾಲದಾಸರು. 'ಭಕ್ತಿಯಲ್ಲಿ ಭಾಗಣ್ಣ' ಎಂದೆನಿಸಿದವರು. ಇವರಿಂದ ರಚಿತವಾದ ಕೃತಿಗಳಲ್ಲಿ ಬಹುಪಾಲು ದ್ವೈತ ಸಿದ್ಧಾಂತದ ನಿರೂಪಣೆ ಹೊರಹೊಮ್ಮುತ್ತದೆ.

ಗೋಪಾಲದಾಸರ ಬಗ್ಗೆ ಪ್ರಧಾನವಾದ ಹಾಗೂ ನಂಬಲರ್ಹವಾದ ಆಕರವೆಂದರೆ, ಅವರ ಸಹೋದರ ಶ್ರೀರಂಗಪ್ಪದಾಸರು ರಚಿಸಿರುವ ಎಂಭತ್ನಾಲ್ಕು ನುಡಿಗಳುಳ್ಳ 'ಗೋಪಾಲವಿಠಲರ ಚರಿತ್ರೆ ಪದ'. ಶ್ರೀಗೋಪಾಲದಾಸರು ಕ್ರಿ.ಶ. 1721 ರಲ್ಲಿ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಮೊಸರುಕಲ್ಲಿನಲ್ಲಿ ಜನಿಸಿದರು. ಇವರ ಕುಟುಂಬ ವೃತ್ತಿ ವ್ಯವಸಾಯ. ತಂದೆ ಮುರಾರಿಯ ನಂತರ, ಇದ್ದ ಆಸ್ತಿಯೆಲ್ಲಾ ಕರಗುತ್ತಿರಲು ತಾಯಿ ವೆಂಕಮ್ಮ ಮಕ್ಕಳೊಡನೆ ಸಂಕಾಪುರಕ್ಕೆ ಬಂದು ನೆಲಸಿದಳು. ದಾಸರ ಮೊದಲಿನ ಹೆಸರು ಭಾಗಣ್ಣ, ಹಾಗೂ ಸಹೋದರರಲ್ಲಿ ಮೊದಲನೆಯವರು. ಸಂಕಾಪುರದ ಶಾನುಭೋಗ ಗುಂಡಪ್ಪನವರು ತಮ್ಮ ಪುತ್ರನ ಜೊತೆಯಲ್ಲಿಯೇ ಭಾಗಣ್ಣನಿಗೂ ಧರ್ಮೋಪನಯನವನ್ನೂ ಮಾಡಿ, ವೇದ ಮಂತ್ರಗಳನ್ನು ಉಪದೇಶಿಸಿದರು. ಆ ಬಳಿಕ ಭಾಗಣ್ಣ ಬಹು ಭಕ್ತಿಯಿಂದ ಗಾಯತ್ರೀ ಮಂತ್ರದ ಸಾಧನೆಮಾಡಿ, ಜನರಿಗೆ ಜೋತಿಷ್ಯ ಹೇಳ ಬಲ್ಲೆನೆಂಬ ಆತ್ಮವಿಶ್ವಾಸದಿಂದ ಆ ವೃತ್ತಿ ಪ್ರಾರಂಭಿಸಿದರು. ದಿನೇ ದಿನೇ ಭವಿಷ್ಯ ಕೇಳಲು ಬರುವವರ ಸಂಖ್ಯೆ ಹೆಚ್ಚಿ ಅವರ ಜೀವನ ಸುಗಮವಾಯಿತು.

ಗೋಪಾಲದಾಸರು ವಿಜಯದಾಸರಿಂದ "ಗೋಪಾಲ ವಿಠಲ" ಎಂಬ ಅಂಕಿತವನ್ನು ಪಡೆದು ಕೃತಿ ರಚನೆಗೈದರು. ಇತರ ಹರಿದಾಸರುಗಳಂತೆ ಕೀರ್ತನೆ, ಸುಳಾದಿ, ಉಗಾಭೋಗ ಈ ಪ್ರಕಾರಗಳ ಮೂಲಕ ತಮ್ಮ ಭಕ್ತಿರಸವನ್ನು ಹರಿಸಿದ್ದಾರೆ. ಅವರ ಕೃತಿಗಳಲ್ಲಿ ಸಾಮಾಜಿಕ ಪ್ರಜ್ಞೆ ಅಷ್ಟಾಗಿ ಕಂಡುಬರುವುದಿಲ್ಲ. ಅವರ ದೃಷ್ಟಿಯೆಲ್ಲಾ ತತ್ತ್ವ ಪ್ರಚಾರದಲ್ಲೇ ಕೇಂದ್ರೀಕೃತವಾಗಿರುವುದು. ಸಮಾಜದಲ್ಲಿನ ಭ್ರಷ್ಟಾಚಾರಿ, ಕಪಟನಾಟಕ ಧಾರಿಗಳನ್ನು ಖಂಡಿಸಿ, ಅವರಿಗೆ ತಿಳುವಳಿಕೆ ಸೂಚಿಸುವ ಮಾರ್ಗದಲ್ಲಿ 'ಮಿಡಿ ಸುಳಾದಿ' ಹಾಗೂ 'ವೈರಾಗ್ಯ ಸುಳಾದಿ' ರಚಿತವಾಗಿವೆ.

ಪ್ರತಿಯೊಬ್ಬ ಸಾಧಕನು ತನ್ನ ಅಪರೋಕ್ಷಾನುಭವದಿಂದ ಸಮರ್ಥವಾದ ನಿಲುವನ್ನು ಭಕ್ತಿಮಾರ್ಗದ ಮುಖಾಂತರ ಪಡೆದಾಗ ತನ್ನ ಜನ್ಮ ಸಾರ್ಥಕವಾಯಿತೆಂದು ಭಾವಿಸುತ್ತಾನೆ. ಆಗಾಗ ಹಿಂದಿನ ತನ್ನ ಅಜ್ಞಾನವನ್ನು ಮರುಕಳಿಸಿಕೊಂಡು ಅವುಗಳಿಗೆ ವ್ಯಥೆಪಡುವುದಲ್ಲದೆ, ವಿಮರ್ಶೆಯ ಸಾಮರ್ಥ್ಯದಿಂದ ತಿರಸ್ಕಾರ ವ್ಯಕ್ತಪಡಿಸುವುದು ಸಹಜ. ಅದೇ ರೀತಿ ಗೋಪಾಲದಾಸರು

ಅನಂತ ಅಪರಾಧ ಎನ್ನಲ್ಲಿ ಉಂಟೋ ದೇವ
ಇನ್ನು ಮುಂದೆ ಆಗೋವು ಅನಂತವಿದ್ದರೆನ್ನ
ಮುನ್ನ ನಿನ್ನ ಆ ನಾಮವನ್ನು ನೆನೆಯದೆ
ಅನಂತ ಅಪರಾಧಕಧಿಕಾರಿ ನಾನಾದನೊ

ಎಂದು ಭಗವಂತನಲ್ಲಿ ಮೊರೆಯಿಟ್ಟಿರುವರು. ಹಲವಾರು ಜನ್ಮದ ಪುಣ್ಯ ಫಲವಾಗಿ ಈ ಮಾನವ ಜನ್ಮ ದೊರಕುವುದು. ಆಗಲೂ ಸಹ ಮಾನವನ ಚಂಚಲ ಮನದ ಚಪಲವನ್ನೂ ನೋಡಿ ದಾಸರು;

ವಿಷೇಸು ಜನ್ಮಂಗಳು
ಎಷ್ಟಾಗಿ ಬಂದು ಪೋದವು
ನಾಶವಾಗಲಿಲ್ಲ ಮನದ ಆಸೆ
ಬೇಸರವಾಗಲಿಲ್ಲ ವಿಷಯಂಗಳಲ್ಲಿ ಬುದ್ಧಿ
ಸಾಸಿರದೊಳಗೊಂದು ಪಾಲಾದರೂ

ಎಂದು ಹಾಡಿರುವರು. ಮನುಷ್ಯನಲ್ಲಿರುವ ವಿಷಯದಾಸಕ್ತಿಯಿಂದ ಅತಿ ಬಿಡುಗಡೆ ಪಡಲಿ ಎಂದು ಭಗವಂತನನ್ನು ಪ್ರಾರ್ಥಿಸಿರುವರು

ಸಕಲಕ್ಕೂ ನಿನ್ನ ಬೇಡುವುದೇನೊ
ವಿಷಯದಾ –
ಸಕುತಿಯ ಬಿಡಿಸು ಗೋಪಾಲ ವಿಠಲರೇಯ

ಇತರ ಹರಿದಾಸರಂತೆ ಇವರು ಸಹ ಹರಿಯ ದಶಾವತಾರಗಳ ವರ್ಣನೆಯನ್ನು ತಮ್ಮದೇ ಆದ ಶೈಲಿಯಲ್ಲಿ ರಚನೆ ಮಾಡಿರುವರು

ಬೇಸರದೆ ಸೃಜಿಸುವ ಸಂಕರುಷಣನಾಗಿ
ಮೋಸಗೊಂಡ ಜ್ಞಾನ ಮತ್ಸ್ಯನಾಗಿ
ಒಳಗಿದ್ದು
ಬೇಸರದೆ ಹೊರುವ ಕೂರ್ಮನಾಗಿ
ಕ್ಲೇಶಗಳ ಪರಿಹರಿಪ ಒಳಗೆ ವರಾಹನಾಗಿ
ದ್ವೇಷ ಪುಟ್ಟಿಸುವ ದೈತ್ಯದ ಮೇಲೆ ನರಸಿಂಹ
ಕಾಸುಕಾಸುಕಾಸಿಗ ಕೂಡಿ ಹಾಕಿಸುವ
ವಾಮನ
ಭೂಸುರರಿಗೆ ತ್ಯಾಗ ಮಾಡಿಸುವ ಭಾರ್ಗವ
ವಾಸಮಾಡುವ ಬುದ್ಧಿ ನೀವ ಒಳಗೆ ರಾಮ
ಮೀಸಲ ಭೋಗಗಳು ಕೊಂಬ ಮನಸಿಗೆ ಕೃಷ್ಣ
ನಾಶಮಾಡುವ ಪರರ ಮೋಹಿಸುವ ಬುದ್ಧ
ದೇಶಗಳು ತಿರುಗುವಾಗ ಮನಕೊಡುವ
ಒಳಗೆ ಕಲ್ಕಿ
ಬೇಸರದೆ ಬಹುರೂಪವಾಗಿ ಗೋಪಾಲ ವಿಠಲ
ಪೋಷಿಸುವ ನಿರ್ವ್ಯಾಜದಿಂದ ನಿತ್ಯ

ಎಂದು ನಾವು ನಡೆಸುವ ಪ್ರತಿಯೊಂದು ಕ್ರಿಯೆಯಲ್ಲಿ ದಶಾವತಾರದ ಒನ್ನಲೆಯನ್ನು ವಿವರಿಸಿದ್ದಾರೆ.

ತಿರುಪತಿಯಲ್ಲಿ ನಡೆಯುವ ಬ್ರಹ್ಮೋತ್ಸವಕ್ಕೆ ದಾಸರು ಪ್ರತಿ ವರ್ಷದಂತೆ ಹೊರಟಾಗ, ಅವರ ಜೊತೆ ಶ್ರೀನಿವಾಸಾಚಾರ್ಯರೆಂಬುವರು ಒಮ್ಮೆ ಹೊರಟರು. ಮಾರ್ಗದಲ್ಲಿ ಶ್ರೀನಿವಾಸಾಚಾರ್ಯರು ಅನಾರೋಗ್ಯದಿಂದ ನಿಸ್ತ್ರಾಣರಾಗಿ

ಮರಣ ಶಯ್ಯೆಯಲ್ಲಿದ್ದಾಗ ದಾಸರು ಧನ್ವಂತ್ರಿಯಾದ ಶ್ರೀನಿವಾಸನನ್ನು ಪ್ರಾರ್ಥಿಸಿದರು.

ಎನ್ನ ಬಿನ್ನಪ ಕೇಳೋ ಧನ್ವಂತ್ರಿ
ದಯ ಮಾಡೊ
ಬಣ್ಣವನು ಇಪ ...
ಬನ್ನ ಬಡಿಸುವ ರೋಗವನ್ನು
ಮೋಚನ ಮಾಡಿ
ಚೆನ್ನಾಗಿ ಪಾಲಿಸುವುದೋ ವಿಭುವೆ

ಹೀಗೆಂದು ಪ್ರಾರ್ಥಿಸಿ ಶ್ರೀನಿವಾಸಾಚಾರ್ಯರ ಜೀವವನ್ನುಳಿಸಿದರೆಂದು ರಂಗಪ್ಪದಾಸರ ಕೃತಿಯಿಂದ ತಿಳಿಯಬಹುದು. ತಿರುಪತಿಯ ಶ್ರೀನಿವಾಸನನ್ನು ತಮ್ಮ ಕೃತಿಯೊಂದರಲ್ಲಿ 'ಭವಕಡಲಿಗೆ ಕುಂಭಸಂಭವ' ಎಂದು ಉದಾತ್ತವಾಗಿ ಕೊಂಡಾಡಿರುವುದಲ್ಲದೆ 'ಸ್ಯಂದನವೇರಿ ಬಾಪ್ಪಾ ರಂಗಾ' ಎಂದು ಆತ್ಮೀಯತೆಯಿಂದ ಬಿನ್ನೈಸಿರುವರು.

ಸ್ಯಂದನ ವೇರಿ ಬಾಪ್ಪಾರಂಗಾ ದೇವೋತ್ತುಂಗ
ನಂದನ ನಂದನ ಅರಿವಿದ ಭಂಗ
ಕಾರುಣ್ಯಾಪಾಂಗ
ಸುಂದರ ವಿಗ್ರಹ ಶುಭಾಂಗ ವಿಹಂಗ ತುರಂಗ
ಕಂದ ವಿರುಚಿಯು ನಂದಿವಾಹನ ಅಮ–
ರೇಂದ್ರ ಸನಕ ಸನಂದನಾದಿ
ಮುನಿವೃಂದ ಬಂದು ನಿಂದು
ಧಿಂ ಧಿಂ ಧಿಂ ಧಿಮಿಕೆಂದು ನಿಂದಾಡಲು
ಆನಂದದಿ ಮನಕೆ

ಹಾಗೆಯೇ ತಿರುಪತಿ ಶ್ರೀನಿವಾಸನನ್ನು ಸಖ್ಯಭಾವದಿಂದ ಭಾವಿಸಿದ್ದಾರೆ. ದೇವರಿಗೆ ಮೂರು ನಾಮಗಳನ್ನಿಟ್ಟವರು ಯಾರು ಎಂದು ಪ್ರಶ್ನಿಸಿ, ದೇವರ ಲೀಲೆಯನ್ನು ವಿನಮ್ರವಾಗಿ ಬಣ್ಣಿಸಿದ್ದಾರೆ

'ಮೂರು ನಾಮಗಳ ಧರಿಸಿದ ಕಾರಣವೇನು
ಸಾರಿ ಪೇಳಲೋ ಈಗಲೆ
ಶ್ರೀರಮಾಪತಿ ಶ್ರೀನಿವಾಸ ವೆಂಕಟರಮಣ
ಯಾರು ಇಟ್ಟರೋ ನಿನಗೆ
ಮೂರು ನಾಮಗಳ'

ಹಾಗೆಯೇ ಅವರು ಮುಂದುವರೆಯುತ್ತಾ

ನಾಲದೇ ನಿನ್ನ ಸೌಂದರ್ಯಕ್ಕೆ ಒಂದು ತಿಲಕ
ಪಾಲಸಾಗರ ಶಾಯಿ ಚೆಲುವ ಮೂರ್ತಿ
ಕಾಲಕಾಲಕ್ಕೆ ಬರುವ ಭಕುತ ಜನಗಳ ವೃಂದ
ದೃಷ್ಟಿ ತ ವುವೆಂಬ ತೋರುವ ಬಗೆಯೆ

ಎಂದು ನಗೆಯಾಡಿದ್ದಾರೆ.

ಗೋಪಾಲದಾಸರ ಕೃತಿಗಳಲ್ಲಿ ವಾತ್ಸಲ್ಯಭಾವ ಸತ್ತ್ವ ಭಗವಂತನ ಬಳಿ ಇರುವ ಸಲಿಗೆ ಉಕ್ಕಿ ಹರಿದಿವೆ. ಅನುಭವ ಪರಿಪೂರ್ಣತೆಯ ಮಟ್ಟದಿಂದ ಭಾವನಾತ್ಮಕವಾಗಿ ರಚಿಸಿದ್ದಾರೆ ಒಮ್ಮೆ ಉಡುಪಿಯ ಶ್ರೀಕೃಷ್ಣ ಇವರಿಗೆ ಸ್ವಪ್ನದಲ್ಲಿ ದರ್ಶನವಿತ್ತನಂತೆ ಕಿಲಕಿಲನೆ ನಗುತ ಚಿಕ್ಕ ಬಾಲಕನಾಗಿ ಸುಳಿದು ಆಡಿದನಂತೆ. ನಂತರ ಅದು ಸ್ವಪ್ನವೆಂದು ತಿಳಿದಾಗ ಅವರು ಕಳವಳ ಬಿದ್ದ ರೀತಿಯನ್ನು ಕೃತಿಗಳಿಸಿದ್ದಾರೆ.

ತಿಳಿಯದೆ ಸ್ವಪ್ನದಿ ಕಳವಳಿಕೆಯಿಂದ
ಸೆಳೆದು ನೂಕಿದೆನಲ್ಲ ಬಳಿ ನಿಲ್ಲಗೊಡದೆ
ಕಿಲ ಕಿಲ ನಗುತ ಚಿನ್ನ ಬಾಲಕನಾಗಿ
ಸುಳಿದು ಆಡಿದರು ತಿಳಿಯದೆ ನಾ ಪೋದೆ
ತಳಕು ಹಾಕಿ ಕಾಲ ತೊಡರಿಸಿ ಕೊಂಡರು
ಎಳೆದು ಎಳೆದು ನಿನ್ನ ಎಬ್ಬಟ್ಟದೆನೆಲ್ಲ

ಎಂದು ತಮ್ಮ ಪೆಚ್ಚುತನದ ಸೋಗನ್ನು ತಡವರಿಸುತ್ತಾ ನಿವೇದಿಸಿರುತ್ತಾರೆ ಅದೇ ರೀತಿಯಲ್ಲಿ ದಾಸರು ಮನಮೋಹಕವಾಗಿ ಗೋಪಿಕೆಯರ ಅಸಹಾಯಕತೆ, ವಿರಹಯಾತನೆ ತಾವೇ ಗೋಪಿಕೆಯರಲ್ಲಿ ಒಬ್ಬರಾದಂತೆ ವಿವರಿಸಿದ್ದಾರೆ. ಕಂಸನ ಆದೇಶದಂತೆ ಅಕ್ರೂರನು ಬಿಲ್ಲ ಹಬ್ಬಕ್ಕೆಂದು ಶ್ರೀಕೃಷ್ಣನನ್ನು ಮಥುರೆಗೆ ಕರೆದು ಕೊಂಡು ಹೋಗುವನು ಆಗ ಗೋಪಿಕೆಯರು ಮುಗ್ಧತೆಯಿಂದ ಕೃಷ್ಣ ತಮ್ಮನ್ನು ಬಿಟ್ಟು, ಹೋದ ಕಾರಣ ಯೋಚಿಸುತ್ತಾರೆ ಅವರು ತಮ್ಮ ಕಳವಳ ವಿರಹ ತಾಪ ಕೃಷ್ಣನ ಮಂತ್ರಿಯೂ ಮತ್ತು ಮಿತ್ರನಾದ ಉದ್ಧವನ ಬಳಿ ಈ ರೀತಿ ಪ್ರಕಟ ಪಡಿಸುತ್ತಾರೆ – ಎಂದು ದಾಸರು ಚಿತ್ರಿಸಿದ್ದಾರೆ

ನಾಳೆ ಬರುವನೆಂದು ಹೇಳಿ ಮಥುರೆಗೆ ಪೋದ ಬಹಳ ದಿನವಾಯಿತಲ್ಲೊ ಉದ್ಧವ
ಕೇಳಿದ್ಯಾ ನೀ ಬಾಹ ವೇಳೆಯಲಿ ಕೃಷ್ಣನ
ಆಲೋಚನೆಯೋಳಿದ್ದವೊ
ಹಳ್ಳಿ ವಾಸಿಗಳು ನಾವು ಪರಿ ಪರಿ ಅಲಂಕರಿಸಿ
ಒಲಿಸಿ ಕೊಂಬುದನರಿಯೆವೊ
ಗೊಲ್ಲಸತಿಯರು ಸದಾ ಗೋರಕ್ಷಕರು ಮೆಯ್ಯ
ತೊಳೆಯಲರಿಯೆವೊ
ಬಲ್ಲಿದನ ಸಹವಾಸ ಮಾಡ್ಯವನ ಮಹಿಮೆಯ
ನೆಲ್ಲ ತಿಳುಹಿಸಿ ಕೊಂಡೆವೊ
ಚಲ್ಲೆಗಂಗಳ ಚಪಲೆಯರು ಮಥುರೆಯ ನಾರಿ
ಯರ ಒಲಪಿಗೆ ಸಾಮೆಮರೇನೊ?

ಇವರ ನಿಂದಾಸ್ತುತಿಗಳು ಸಹ ಇತರ ದಾಸರುಗಳಂತೆ ತೀಕ್ಷ್ಣವಾಗಿದ್ದು, ಭಗವಂತನ ಮಹಿಮೆಯನ್ನು ಅಪಾರವಾಗಿ ಚಿತ್ತರಿಸುತ್ತವೆ. ಶ್ರೀಕೃಷ್ಣನಿಗೆ ಅಷ್ಟ ಸೌಭಾಗ್ಯದ ಮದದಿಂದ ನಮ್ಮನ್ನು ನಿಕೃಷ್ಟವಾಗಿ ಕಾಣುವನೆಂದು ಬಗೆದು, ನಮ್ಮನ್ನು ಸಲಹುವ ಶಕ್ತಿಯಿಲ್ಲದಿದ್ದರೆ 'ಭಕ್ತವತ್ಸಲ' ನೆಂಬ ಬಿರುದು ವಮನ ಮಾಡೆಂದು ಆಗ್ರಹ ಪಡಿಸಿರುವರು.

ಸೃಷ್ಟಿಗೊಡೆಯಾ ಕೇಳೆಂದೆಷ್ಟು ನಾ
ತುತಿಸಲು
ದೃಷ್ಟಿಯಿಂದಲಿ ಎನ್ನ ಕಡೆಯು ನೋಡಲೊಲ್ಲೆ
ಅಷ್ಟ ಸೌಭಾಗ್ಯ ವೆಂಬೋದೆಷ್ಟು ಮದವೊ
ನಿನಗೆ
ಗಟ್ಯಾಗಿ ನೀನಿಲ್ಲದನ್ಯರಿಲ್ಲನೆಂದರೆ
ನೊಟ್ಟ ತಿರುಹಿ ಮೊಗ ಅಟ್ಟವೇರುತಲಿದೆ
ಎಷ್ಟಲ್ಲವೆಂದು ಕಣ್ಣ ಬಿಟ್ಟರಂಜುವುನಲ್ಲ
ಗಟ್ಟಿ ಭಕುತಿ ಪಾಶದಿ ಕಟ್ಟಿ ಎನ್ನುದರದೊಳು
ಇಟ್ಟ ಕೊಂಬೆನೊ ಎ ಜಿಷ್ಣು ಸಖನೆ ಕೃಷ್ಣ
ಭ್ರಷ್ಟನೆಂತೆಂದು ದೂರದೃಷ್ಟಿಲಿ ನೋಡಿದರೆ
ಬಿಟ್ಟು ಕೊಡೊ ಭಕ್ತವತ್ಸಲನೆಂಬ ಬಿರುದು

ಗೋಪಾಲದಾಸರು ನಂಬಿ ಅನುಸರಿಸಿದ ದ್ವೈತಸಿದ್ಧಾಂತವನ್ನು ಮುಗ್ಧವಾದ ರೀತಿಯಲ್ಲಿ ತಮ್ಮ ಕೃತಿಗಳಲ್ಲಿ ಪ್ರಕಟ ಪಡಿಸಿದ್ದಾರೆ. ಹಾಗೂ ಮಧ್ವಾಚಾರ್ಯರ ಮತ್ತು ಮಂತ್ರಾಲಯ ಗುರು ಸಾರ್ವಭೌಮ ರಾಘವೇಂದ್ರ ಮಹಿಮೆಗಳ ಬಗ್ಗೆ ಅಪಾರವಾಗಿ ಕೊಂಡಾಡಿದ್ದಾರೆ. ಪುನರ್ ಪ್ರತಿಷ್ಠಾಪನೆಯಾದ ದಾಸಸಾಹಿತ್ಯದ ರೂಪರೇಖೆ ನಿರ್ಮಿಸಿದವರಲ್ಲಿ ಶ್ರೀಗೋಪಾಲದಾಸರು ಧ್ರುವ ನಕ್ಷತ್ರದಂತೆ ಶೋಭಾಯಮಾನರು.

# ತ್ಯಾಗರಾಜರ ಪಂಚರತ್ನ ಕೃತಿಗಳು

ಡಾ|| ವಿ. ಎಸ್. ಸಂಪತ್ಕುಮಾರಾಚಾರ್ಯ

ಕರ್ನಾಟಕದ ಸಂಗೀತ ಸೌಧವನ್ನು ಭವ್ಯವಾಗಿ ನಿರ್ಮಿಸಿದ ವಿಭೂತಿ ಪುರುಷರಲ್ಲಿ ತ್ಯಾಗರಾಜರು ಒಬ್ಬ ಪ್ರಮುಖರು. ಶುದ್ಧ ಸಂಗೀತದಲ್ಲಿ ಇವರು ಹಿಮಾಲಯದ ಔನ್ನತ್ಯವನ್ನು ಮುಟ್ಟಿ ಅಲ್ಲಿ ಗುಪ್ತವಾಗಿದ್ದ ಅನೇಕ ಚಿಲುಮೆಗಳನ್ನು ಬೆಳಕಿಗೆ ತಂದರು, ಮನೋರಂಜನೆಯ ಸಾಧನವಾಗಿದ್ದ ಸಂಗೀತವನ್ನು ಮೋಕ್ಷಸಾಧನದ ಅಂತಸ್ತಿಗೆ ಕೊಂಡೊಯ್ದರು, ಭಾರತದ ಪುರಾತನ ಋಷಿಗಳಂತೆ ಬಾಳಿ, ತ್ಯಾಗಗಳಲ್ಲಿ ರಾಜರಂತಿದ್ದು ಆಧ್ಯಾತ್ಮಿಕ ಬೆಳಕನ್ನು ಬೀರಿ, ನಾದೋಪಾಸನೆಯಿಂದ ಪರಬ್ರಹ್ಮನಾದ ಶ್ರೀರಾಮಚಂದ್ರಮೂರ್ತಿಯನ್ನು ಕಂಡರು. ಇವರ ಆಪ್ತ ಶಿಷ್ಯರಲ್ಲೊಬ್ಬರಾಗಿದ್ದ ವಾಲಾಜಪೇಟೆ ವೆಂಕಟರಮಣ ಭಾಗವತರು ತ್ಯಾಗರಾಜರನ್ನು ಹೀಗೆ ಸ್ತುತಿಸಿದ್ದಾರೆ

ವ್ಯಾಸೋ ನೈಗಮಚರ್ಚಯಾ
  ಮೃದುಗಿರಾ ವಲ್ಮೀಕಜನ್ಮಾ ಮುನಿಃ ।
ವೈರಾಗ್ಯೇ ಶುಕ ಏವ
  ಭಕ್ತಿವಿಷಯೇ ಪ್ರಹ್ಲಾದ ಏವ ಸ್ವಯಂ ॥
ಬ್ರಹ್ಮಾನಾರದ ಏವ ಚಾಪತ್ರಿಮಯೋಃ
  ಸ್ಸಾಹಿತ್ಯ ಸಂಗೀತಯೋಃ ।
ಯೋ ರಾಮಾಮೃತ ಪಾನ ನಿರ್ಜಿತಶಿವಃ
  ತಂ ತ್ಯಾಗರಾಜಂ ಭಜೇ ॥

ಇವರು ವ್ಯಾಸರಿಗೆ ಸಮಾನ, ಪದಲಾಲಿತ್ಯ ರಚನೆಯಲ್ಲಿ ವಾಲ್ಮೀಕಿಗೆ ಸಮಾನರು, ವೈರಾಗ್ಯದಲ್ಲಿ ಶುಕರಿಗೆ ಸಮಾನ, ಭಕ್ತಿಯಲ್ಲಿ ಪ್ರಹ್ಲಾದನಿಗೆ ಸಮಾನ, ಸಂಗೀತ ಸಾಹಿತ್ಯದಲ್ಲಿ ಬ್ರಹ್ಮ, ನಾರದರಿಗೆ ಸಮಾನ – ಎಂದು ಸ್ತುತಿಸಿರುವುದು ವಾಸ್ತವವಾದುದು. ಪುರಂದರದಾಸರಂತೆ ತ್ಯಾಗರಾಜರೂ ತಮ್ಮ ಗುರುವಿನ ಹೊಗಳಿಕೆಗೆ ಪಾತ್ರರಾದರು. ಕನ್ನಡದಲ್ಲಿ ಭಕ್ತಿ ಪಂಥಕ್ಕೆ ಅತ್ಯಂತ ಹಿರಿಯ ಸ್ಥಾನವನ್ನು ಕೊಟ್ಟ ದಾಸವರೇಣ್ಯರಾದ ಪುರಂದರ ದಾಸರ ಕೃತಿಗಳಿಂದ ಸ್ಫೂರ್ತಿಪಡೆದು ಅವರ ಮೇಲ್ಪಂಕ್ತಿಯನ್ನು ಅನುಸರಿಸಿ ಭಕ್ತಿಯುತವಾದ ಸಾವಿರಾರು ಕೃತಿರತ್ನಗಳನ್ನು ರಚಿಸಿ, ಆದರ್ಶ ಗುರುವಿನ ಆದರ್ಶ ಶಿಷ್ಯರಾಗಿ ಸಂಗೀತ ಮತ್ತು ಸಾಹಿತ್ಯ ಪ್ರಪಂಚದಲ್ಲಿ ಅಮರರಾಗಿದ್ದಾರೆ. ತಾವು ಭಕ್ತಿ ಸಂಗೀತದ ಸಂದೇಶವನ್ನು ಸಾರುವುದಕ್ಕಾಗಿಯೇ ಜನ್ಮವೆತ್ತಿರುವುದಾಗಿಯೂ, ಭಕ್ತಿ ಸಂಗೀತದ ಕೃತಿಗಳನ್ನು ಶ್ರೀರಾಮನೇ ತಮಗೆ ಬೋಧಿಸಿದನೆಂದೂ 'ದಾಶರಥೇ' ಎಂಬ ತೋಡಿ ರಾಗದ ಕೃತಿಯಲ್ಲೂ, ಗಾನವಾರಿಧಿ ರಾಗದ 'ದಯಜೂಚುಟಕಿದಿ ವೇಳರಾ' ಎಂಬ ಕೃತಿಯಲ್ಲೂ ತಿಳಿಸಿ ಸಂಗೀತವು ಭಕ್ತಿಯುತವಾಗಿರಬೇಕು ಎಂದಿದ್ದಾರೆ

ನಿಜವಾದ ಭಕ್ತಿಯ ಸ್ವರೂಪವೇನು ಎಂಬುದನ್ನು ಸ್ವಲ್ಪ ಪರಿಶೀಲಿಸೋಣ. ನಾರದರು ಭಕ್ತಿ ಸೂತ್ರದಲ್ಲಿ ಹೀಗೆ ಹೇಳುತ್ತಾರೆ 'ಸಾತ್ವಸ್ಮಿನ್ ಪರಮ ಪ್ರೇಮ ರೂಪಾ' – ಭಕ್ತನು ಭಗವಂತನಿಗೂ ಭಕ್ತನಿಗೂ ಇರುವ ಸಂಬಂಧ ಅದು ಪರಮ ಪ್ರೇಮರೂಪವಾದುದು. ಪ್ರೇಮವೆಂದರೆ ಸಾಮಾನ್ಯ ಬಳಕೆಯಲ್ಲಿ ಪ್ರೀತಿ ಎಂಬರ್ಥ. ಇದರಲ್ಲಿ ಪ್ರತಿಫಲಾಪೇಕ್ಷೆ ಅಡಗಿದೆ. ಇದೊಂದು ಬಗೆಯ ವ್ಯಾಪಾರೀ ಮನೋಧರ್ಮ, ನಾವು ದೇವರನ್ನು ಪ್ರೀತಿಸುವುದು, ಅವನಿಗೆ ಏನಾದರೂ ಅರ್ಪಿಸುವುದು – ಇತ್ಯಾದಿಗಳಲ್ಲ ಪ್ರತಿಫಲಾಪೇಕ್ಷೆಯಿದೆ, ನಾವು ಒಂದು ಕೊಟ್ಟರೆ ಅದನ್ನು ನಾಲ್ಮಡಿಯಾಗಿ ದೇವರು ನಮಗೆ ಕೊಡಬೇಕೆಂದು ನಿರೀಕ್ಷಿಸುತ್ತೇವೆ. ಇಂತಹ ಭಕ್ತಿಯಲ್ಲಿ ಶ್ರದ್ಧೆ ಇದ್ದರೂ ಅದು ನಿಜವಾದ ಶುದ್ಧವಾದ ಭಕ್ತಿ ಅಲ್ಲ, ನಿಜವಾದ ಭಕ್ತಿಯು ಪರಮ ಪ್ರೇಮ, ಇದರಲ್ಲಿ ಅಂಜಿಕೆ ಇಲ್ಲ, ಅಸೂಯೆ ಇಲ್ಲ, ಭಗವಂತನು ಭಕ್ತನ ಅತ್ಯಂತ ನಿಕಟ ಬಂಧು, ಅವನ ಹತ್ತಿರ ಭಕ್ತನಿಗೆ ಬಹಳ ಸಲಿಗೆ, ಇನ್ನೊಬ್ಬ ಭಕ್ತನ ವಿಷಯವಾಗಿ ಅಸೂಯೆ ಪಡದೆ ಅಂತಹವನನ್ನು ಕಂಡರೆ ಆನಂದ ಪಡುತ್ತಾನೆ, ಇಂತಹ ಪ್ರೇಮವು 'ಅಮೃತ ಸ್ವರೂಪಾಚ'– ಅಮೃತ ಸ್ವರೂಪವಾದ ಪರಮ ಪ್ರೇಮ. ಇದು ಲಭಿಸಿದನಂತರ ಭಕ್ತನು ಸಿದ್ಧನಾಗುವನು, ಅಮೃತನಾಗುವನು, ತೃಪ್ತನಾಗುವನು. ಶಾಂಡಿಲ್ಯ ಭಕ್ತಿ ಸೂತ್ರದಲ್ಲಿ 'ಸಾ ಪರಮಾನುರಕ್ತಿರೀಶ್ವರೇ' –ಈಶ್ವರನಲ್ಲಿ ಪರಮಾನುರಾಗವೇ ಭಕ್ತಿ ಎಂದು ಹೇಳಿದೆ 'ಸ್ವಸ್ವರೂಪಾನುಸಂಧಾನಂಭಕ್ತಿರಿತ್ಯಭಿಧೀಯತೇ'–ತನ್ನ ನಿಜಸ್ವರೂಪವನ್ನು ಅರಸುವುದೇ ಭಕ್ತಿ ಎಂದು ಆದಿ ಶಂಕರಾಚಾರ್ಯರೂ "ಭಕ್ತಿರಪಿ ನಿರತಿಶಯ ಪ್ರಿಯಾನನ್ಯಸ್ಯ ಪ್ರಯೋಜನ ಸ್ವೇತರವೈತೃಷ್ಣಾವಹ ಜ್ಞಾನವಿಶೇಷ ಏವ"– ಒಂದು ವಸ್ತುವು ಪ್ರಿಯತಮವೆನಿಸಿ, ಅದರಿಂದ ಬೇರಾವ ಪ್ರಯೋಜನವನ್ನೂ ಅಪೇಕ್ಷಿಸದೆ, ಅದು ಹೊರತು ಬೇರೆ ಯಾವಸ್ತುವೂ ಬೇಡವೆನಿಸುವಂತಹ (ತದಿತರಾನಿ ತೃಣಾಯಮಾನೇ) ವಿಶೇಷ ಅರಿವೇ ಭಕ್ತಿ ಎಂದು ರಾಮಾನುಜಾಚಾರ್ಯರು ಹೇಳಿದ್ದಾರೆ

ಸ್ವಾಮಿ ವಿವೇಕಾನಂದರು ಹೇಳಿರುವಂತೆ 'ಎಲ್ಲಿ ಪ್ರೇಮವಿದೆಯೋ ಅಲ್ಲಿ ಕಾಮವಿಲ್ಲ, ಎಲ್ಲಿ ಕಾಮವಿದೆಯೋ ಅಲ್ಲಿ ಪ್ರೇಮವಿಲ್ಲ. ಭಕ್ತನ ಲಕ್ಷಣಗಳಾವುವು ಎಂಬುದನ್ನು ತ್ಯಾಗರಾಜರು 'ಭಕ್ತುನಿ ಚರಿತ್ರಮು ವಿನವೇ ಮನಸಾ' ಎಂಬ ಬೇಗಡೆ ರಾಗದ ಕೃತಿಯಲ್ಲಿ ವಿವರಿಸುತ್ತಾ ಭಕ್ತನು; ತಾನು ಜಪತಪವಮಾಡಿದವನೆಂದು ಜಂಬ ಪಡಬಾರದು, ಕಪಟಿಯಂತೆ ನಡೆದುಕೊಳ್ಳಬಾರದು, ಮೋಸಮಾಡಬಾರದು, ತಾನು ಎಲ್ಲರಿಗಿಂತ ಹಿರಿಯನಾಗಬೇಕೆಂಬ ಆಸೆಯಿಂದ ಅಲೆಯಬಾರದು, ಕುಟುಂಬದವರಲ್ಲಿ ವ್ಯಾಮೋಹಿತನಾಗಿರಬಾರದು, ಪ್ರಾಪಂಚಿಕ ಸಿರಿಯು ಸತ್ಯವೆಂದು ತಿಳಿಯಬಾರದು, ಶಿವವಿಷ್ಣುವಿನಲ್ಲಿ ಭೇದ ಮಾಡಬಾರದು, ತಾನೊಬ್ಬನೇ ಪ್ರಾಮಾಣಿಕ ಮತ್ತು ಯೋಗ್ಯನೆಂದು ತೋರ್ಪಡಿಸುತ್ತಾ ಸಂಪಾದನೆ ಮಾಡಬಾರದು, ತಾಮಸ ಮತ್ತು ರಾಜಸಿಕ ಗುಣಗಳಿಗೆ ಬಲಿಯಾಗಬಾರದು, ಶ್ರೀರಾಮನ ಪಾದಕಮಲಗಳನ್ನು ಎಂತಹ ಪರಿಸ್ಥಿತಿ ಒದಗಿದರೂ ಮರೆಯದೆ ರಾಜಯೋಗದ ಹಾದಿಯಲ್ಲಿ ಹೋಗಬೇಕು, ಆಂಜನೇಯನ ಭಕ್ತಿಯಿಂದ ಸ್ಫೂರ್ತಿ ಪಡೆಯ ಬೇಕು, ಭಗವಂತನ ಕರುಣೆಗಾಗಿ ಅರ್ಹತೆ ಪಡೆದು ನಂತರ ಹಂಬಲಿಸ ಬೇಕು, ಎಂದು ಹೇಳಿದ್ದಾರೆ. ಇವೆಲ್ಲ ಗುಣಗಳುಳ್ಳವನೇ ನಿಜವಾದ ಭಕ್ತ. ಇಂತಹ ಭಕ್ತನನ್ನು ಭಗವಂತನು ಪ್ರೀತಿಸುತ್ತಾನೆ, ಮಾಧವನು ಭಕ್ತಿಯಿಂದ ಮಾತ್ರ ತುಷ್ಟನಾಗುತ್ತಾನೆ.

ತ್ಯಾಗರಾಜರ ಘನರಾಗ ಪಂಚರತ್ನಗಳು ಭಕ್ತಿಯೋಗ ಸಾಧನೆಯಿಂದ ಪರಮಾತ್ಮನನ್ನು ಕಾಣಲು ಸಾಧ್ಯವಾಗುವ ಸೋಪಾನಗಳಾಗಿವೆ. ಪರಮಾತ್ಮನನ್ನು ಕಾಣಲು ಹಂಬಲಿಸುವ, ತವಕಪಡುವ ಭಕ್ತನ ಹೃದಯದ ಭಾವನೆಗಳ ರಮ್ಯ ಚಿತ್ರವಾಗಿವೆ ನಾಟ, ಗೌಳ, ಆರಭಿ, ವರಾಳಿ ಮತ್ತು ಶ್ರೀರಾಗಗಳಿಗೆ ಘನರಾಗ ಪಂಚಕಗಳೆಂದು ಹೆಸರು. ಈ ರಾಗಗಳು ಮಧ್ಯಮ ಕಾಲದಲ್ಲಿ ಹೆಚ್ಚು ಶೋಭಾಯಮಾನವಾಗಿರುವುದರಿಂದ ಸಾಮಾನ್ಯವಾಗಿ ವೈಣಿಕರು ಇವುಗಳಲ್ಲಿ ತಾನಗಳನ್ನು ನುಡಿಸುತ್ತಾರೆ

ತ್ಯಾಗರಾಜರ ಘನರಾಗ ಪಂಚರತ್ನಗಳು ವಿದ್ವತ್ಪೂರ್ಣವಾದ ಅಸಮಾನವಾದ ಸಂಗೀತ

ರಚನೆಗಳಾಗಿವೆ ಇವುಗಳನ್ನು ಅವರ ಆರಾಧನೆಯ ಸಂದರ್ಭದಲ್ಲಿ ತಪ್ಪದೆ ಹಾಡುತ್ತಾರೆ. ಇವುಗಳನ್ನು ತ್ಯಾಗರಾಜರು ತಮ್ಮ ಉಂಛವೃತ್ತಿಯ ಭಜನೆಗಳಲ್ಲಿ ತಪ್ಪದೆ ಹಾಡುತ್ತಿದ್ದರು ಇವುಗಳನ್ನು ತಾನವರ್ಣಗಳ ಶೈಲಿಯಲ್ಲಿ ರಚಿಸಿದ್ದಾರೆ ಇವು ಕ್ರಮವಾಗಿ ನಾಟರಾಗದಲ್ಲಿ 'ಜಗದಾನಂದ ಕಾರಕ', ಗೌಳರಾಗದಲ್ಲಿ 'ದುಡುಕುಗಲನನ್ನೇ ದೊರಕೊಡುಕು ಬ್ರೋಚುರಾ', ಆರಭಿರಾಗದಲ್ಲಿ'ಸಾಧಿಂಚನೇ ಓ ಮನಸಾ' ವರಾಳಿರಾಗದಲ್ಲಿ 'ಕನ ಕನ ರುಚಿರಾ' ಮತ್ತು ಶ್ರೀರಾಗದಲ್ಲಿ 'ಎಂದರೋ ಮಹಾನುಭಾವುಲು' ಎಂದು ಆರಂಭವಾಗುತ್ತವೆ.

ಸಾಹಿತ್ಯದ ಮತ್ತು ಭಕ್ತಿಯೊಂದಿಗಿನ ದೃಷ್ಟಿಯಿಂದ ಈ ಕೃತಿಗಳನ್ನು ನೋಡಿದರೆ ಇವನ್ನು ನಾಟಿ ಆರಭಿ, ಗೌಳ, ವರಾಳಿ ಮತ್ತು ಶ್ರೀ ಈ ಕ್ರಮದಲ್ಲಿ ವಿಶ್ಲೇಷಿಸಬಹುದು. ಮೊದಲನೆಯದು ಜಗದಾನಂದ ಕಾರಕ ಎಂಬ ನಾಟರಾಗದ ಕೃತಿ ಇದು ಸಂಸ್ಕೃತ ಭಾಷೆಯಲ್ಲಿದೆ. ಇದರಲ್ಲಿ ತ್ಯಾಗರಾಜರು ಶ್ರೀರಾಮಚಂದ್ರನನ್ನು ನೂರೆಂಟು ನಾಮಗಳಿಂದ ಸ್ತುತಿಸಿದ್ದಾರೆ ಇದೊಂದು ಸ್ತೋತ್ರ (Song of adoration) ಪದವಿಭಾಗಮಾಡಿ ಮೊದಲು ಓಂ ಮತ್ತು ಕೊನೆಯಲ್ಲಿ ನಮಃ ಎಂಬುದಾಗಿ ಸೇರಿಸಿಕೊಂಡರೆ 'ಓಂ ಜಗದಾನಂದ ಕಾರಕಾಯ ನಮಃ' 'ಓಂ ಜಾನಕೀ ಪ್ರಾಣನಾಯಕಾಯನಮಃ' ಇತ್ಯಾದಿ ನೂರೆಂಟು ನಾಮಗಳಾಗುತ್ತವೆ. ಈ ಕೃತಿಯನ್ನು ತ್ಯಾಗರಾಜ ಕೃತ ಶ್ರೀರಾಮಾಷ್ಟೋತ್ತರ ಕೃತಿ ಎನ್ನುತ್ತಾರೆ. ಇದು ಹತ್ತು ಚರಣಗಳಿಂದ ಕೂಡಿದೆ. ಇದಲ್ಲದೆ ನಾಟರಾಗವು ವೀರರಸಪ್ರಧಾನವಾದ ರಾಗ. ಆದ್ದರಿಂದಲೇ ಈ ಕೃತಿಯಲ್ಲಿರುವ ನಾಮಗಳೆಲ್ಲವೂ ಶ್ರೀರಾಮನ ಶೌರ್ಯ ಪ್ರತಾಪಗಳನ್ನು ಸೂಚಿಸುತ್ತವೆ. ಇದರಲ್ಲಿ ಬರುವ ವಿರಾಧ ವಿರಾವಣ, ಪಾಪಗಜ ನೃಸಿಂಹ, ಅನಿಮಿಷ ವೈರಿವಾಲಿದ ಸಮೀರಣ, ಅಸುರ ಮದಗಜ ಹಗಣ–ಇತ್ಯಾದಿ ಪದಗಳು ಶ್ರೀರಾಮಚಂದ್ರನ ಶೌರ್ಯಪ್ರತಾಪಗಳನ್ನು ಸೂಚಿಸುವ ಪದಗಳಾಗಿರುವುದು ಗಮನಾರ್ಹ. ಈ ಕೃತಿಯು

ಲಕ್ಷ್ಮೀಂ ವಾಪಿ ಪರಿತ್ಯಕ್ಷ್ಯೇ ಪ್ರಾಣಾನ್ ದೇಹಂ ಅಥಾಪಿ ವಾ ।
ಶ್ರೀವತ್ಸಂ ಕೌಸ್ತುಭಂ ಮಾಲಾಂ ವೈಜಯಂತೀಂ ಅಥಾಪಿ ವಾ ॥
ಶ್ವೇತ ದ್ವೀಪಂ ಚ ವೈಕುಂಠಂ ಕ್ಷೀರಸಾಗರ ಮೇವ ಚ ।
ಶೇಷಂ ಚ ಗರುಡಂ ಚೈವ ನಭಕ್ತಂ ತ್ಯಕ್ತುಮುತ್ಸಹೇ ॥
(ಸ್ಕಾಂದ ಪುರಾಣ-ವೈಶಾಖ ಮಹಾತ್ಮೆ)

ಶುದ್ಧ ಸಾತ್ವಿಕಭಕ್ತನನ್ನು ಭಗವಂತನ ಎಂದಿಗೂ ಕೈ ಬಿಡುವುದಿಲ್ಲ ಲಕ್ಷ್ಮಿಯನ್ನಾಗಲೀ, ದೇಹ ಅಥವಾ ಪ್ರಾಣವನ್ನಾಗಲೀ, ಶ್ರೀವತ್ಸ,ಕೌಸ್ತುಭ, ವೈಜಯಂತಿಮಾಲೆ, ಶ್ವೇತದ್ವೀಪ, ವೈಕುಂಠ, ಕ್ಷೀರಸಾಗರ, ಶೇಷ, ಗರುಡ, ಯಾವುದನ್ನೇ ಆಗಲಿ ಕೈಬಿಡುವನೇ ವಿನಹಾ ಭಕ್ತನನ್ನು ಕೈ ಬಿಡುವುದಿಲ್ಲ.

ಧಾತು ಮತ್ತು ಮಾತುಗಳ ಗಾಂಭೀರ್ಯಕ್ಕೆ ಪ್ರಸಿದ್ಧವಾಗಿದೆ ಈ ಕೃತಿಯ ಚರಣಗಳು ಷಡ್ಜ ಅಥವಾ ಪಂಚಮದಿಂದ ಪ್ರಾರಂಭವಾಗುತ್ತವೆ. 9 ನೆಯ ಚರಣದಲ್ಲಿ ಮಧ್ಯಮ ಷಡ್ಜದಿಂದ ತಾರ ಷಡ್ಜಕ್ಕೆ ಉಲ್ಲಸಿತ ಗಮಕದಿಂದ ಹೋಗುವುದು ಈ ಕೃತಿಗೆ ವಿಶೇಷ ಸೊಬಗನ್ನುಂಟು ಮಾಡಿದೆ

ಎರಡನೆಯದು 'ಸಾಧಿಂಚೆನೇ' ಎಂಬ ಆರಭಿ ರಾಗದ ಕೃತಿ, ಭಗವಂತನನ್ನು ಪೂಜಿಸಿದ ತರುವಾಯ ಭಕ್ತನು ಆವನನ್ನು ಕಾಣಲು ತವಕಪಡುತ್ತಾನೆ. ಆದರೆ ಅವನ ದರ್ಶನವು ಅಷ್ಟು ಸುಲಭವೇ? ಭಕ್ತನಿಗೆ ತನ್ನ ಪ್ರಯತ್ನಗಳೆಲ್ಲಾ ವಿಫಲವಾಯಿತೆಂಬ ಭಾವನೆ ಉಂಟಾಗಿ ನಿರಾಶೆಯಿಂದ ಕಳವಳ, ಜಿಗುಪ್ಸೆ ಮತ್ತು ಅತೀವ ದುಃಖ ಉಂಟಾಗುತ್ತದೆ. ಈ ಕೃತಿಯಲ್ಲಿ ತ್ಯಾಗರಾಜರು ತಮ್ಮದುಃಖವನ್ನೇ ತೋಡಿಕೊಂಡಿದ್ದಾರೆ. ಇದು ಪರಮಾತ್ಮನ ಲೀಲೆಗಳಿಗೆ ವ್ಯಾಖ್ಯಾನದಂತಿದೆ, ತ್ಯಾಗರಾಜರ 'ನೌಕಾಚರಿತ್ರೆ' ಎಂಬ ಗೇಯರೂಪಕವು ಇದಕ್ಕೆ ಆಧಾರವಾಗಿರಬಹುದು. ಇದು 9 ಚರಣಗಳಿರುವ ತೆಲುಗು ಭಾಷೆಯ ಕೃತಿ, ಪರಮಾತ್ಮನು ಭಕ್ತರ ಮನಸ್ಸನ್ನು ಪರೀಕ್ಷಿಸಲು ಅನೇಕಬಗೆಯ ಅಡಚಣೆಗಳನ್ನೂ ಕಷ್ಟಗಳನ್ನೂ ತಂದೊಡ್ಡುತ್ತಾನೆ. ಶ್ರೀಕೃಷ್ಣನು ಗೋಪಿಯರ ಮನೋರಥಗಳನ್ನು ಪೂರೈಸದೆ ಅವರನ್ನು ಸಮಯಕ್ಕೆ ತಕ್ಕಂತೆ ಹಾಸ್ಯಮಾಡಿ ಮರುಳು ಮಾತಾಡ ವವನು. (ಗೋಪೀಜನ ಮನೋರಥ ಮೊಸಂಗ ಲೇಕನೆ ಗೇಲಿಯು ಜೇಸೇಡುವಾಡು), ದೇವಕಿ ವಸುದೇವರಿಗೆ ಅನೇಕ ಬಗೆಯ ಪರೀಕ್ಷೆಗಳನ್ನು ಒಡ್ಡಿದವನು. (ದೇವಕಿ ವಸುದೇವುಲ ನೇಗಿಂಚಿನಟು) ಮುಂತಾದ ಅಭಿಪ್ರಾಯಗಳು ಗಮನಾರ್ಹ. ಇದು ನಿಸ್ಪೃಹತೆಯ ಕೃತಿ

ಹೀಗೆ ದೇವರಲ್ಲಿ ದುಃಖವನ್ನು ತೋಡಿಕೊಂಡ ಭಕ್ತನು ದೇವರದರ್ಶನವು ಇನ್ನೂ ಲಭಿಸದಿರುವುದಕ್ಕೆ ಕಾರಣವೇನು ಎಂಬುದನ್ನು ಯೋಚಿಸಲು ತೊಡಗಬಹುದು ತಾನು ಹಿಂದೆ ಮಾಡಿರಬಹುದಾದ ಅನೇಕ ಪಾಪಗಳನ್ನು ಜ್ಞಾಪಿಸಿಕೊಂಡು ಪಶ್ಚಾತ್ತಾಪದಿಂದ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುತ್ತಾನೆ. ಹೀಗೆ ಪರಿಶುದ್ಧನಾದ ನಂತರವೇ ಭಕ್ತನು ಭಗವಂತನ ದರ್ಶನಕ್ಕೆ ಅರ್ಹನಾಗುತ್ತಾನೆ 'ದುಡುಕುಗಲ' ಎಂಬ ಗೌಳರಾಗದ ಕೃತಿಯಲ್ಲಿ ತ್ಯಾಗರಾಜರು ತಾವು ಯಾವ ಪಾಪವನ್ನೂ ಮಾಡದಿದ್ದರೂ ಎಲ್ಲವನ್ನೂ ತಮ್ಮ ಮೇಲೆ ಆರೋಪಿಸಿಕೊಂಡಿದ್ದಾರೆ. ದೇವರಲ್ಲಿ ಮೊರೆಯಿಟ್ಟಿದ್ದಾರೆ. ಇದರಲ್ಲಿ ಇತರರಿಗೆ ಅಂತಹ ಪಾಪಗಳನ್ನು ಮಾಡಬೇಡಿ ಎಂದು ಹೇಳಿರುವಂತಿದೆ ಸಂಗೀತಗಾರನಾದವನು ಸಂಗೀತವನ್ನು ತನ್ನ ಹೊಟ್ಟೆಯ ಪಾಡಿಗಾಗಿ ಇಟ್ಟುಕೊಂಡು ಮಾಡಬಹುದಾದ ಎಲ್ಲ ಬಗೆಯ ಪಾಪಗಳ ಪಟ್ಟಿಯು ಇದರಲ್ಲಿ ಅಡಕವಾಗಿದೆ ಇದು ಪಶ್ಚಾತ್ತಾಪಭಾವದ ಕೃತಿ (Song of Repentence), 'ತೆಲಿಯಲೇಟಿವಿಟಿ' ಎಂದು ಆರಂಭವಾಗುವ ಆರನೆಯ ಚರಣದಲ್ಲಿ ಮತ್ತು 'ಮಾನವ ತನು ದುರ್ಲಭ ಮನುಚು' ಎಂದಾರಂಭವಾಗುವ ಒಂಭತ್ತನೆಯ ಚರಣದಲ್ಲಿ ಭಕ್ತಿ ವಿಹೀನರಾದ ಸಂಗೀತ ವಿದ್ವಾಂಸರಿಗೂ, ಸಂಗೀತದ ಉಪಾಧ್ಯಾಯರಿಗೂ ಮುನ್ನೆಚ್ಚರಿಕೆಯನ್ನಿತ್ತಿದ್ದಾರೆ. 'ಸ್ವರಜಯಾದಿಗಳನ್ನು ಅರಿಯದವನೂ, ಕಲ್ಲು ಹೃದಯದವನೂ ಆಗಿದ್ದು ಶ್ರೇಷ್ಠ ಭಕ್ತನಂತೆ ನಟಿಸುತ್ತಾ ನಟವಿಟರು, ವನಿತೆಯರು ಮುಂತಾದ ಏನೂ ಅರಿಯದವರಿಗೆ ಉಪದೇಶ ಮಾಡುತ್ತಾ ಅವರನ್ನು ವಶಪಡಿಸಿಕೊಳ್ಳಲು ಯತ್ನಿಸಿ ನಿನ್ನಪಾದಾರವಿಂದವನ್ನು ಪೂಜಿಸಲು ಉದಾಸೀನನಾಗಿರುವ

( 32 ನೇ ಪುಟ ನೋಡಿ )

ವ್ಯಾಧಸ್ಯಾಚರಣಂ ಧ್ರುವಸ್ಯ ಚ ವಯೋಃ ವಿದ್ಯಾ ಗಜೇಂದ್ರಸ್ಯ ಕಾ ।
ಕುಬ್ಜಾಯಾಃ ಕಮನೀಯ ರೂಪಮಧಿಕಂ ಕಿಂತತ್ ಸುಧಾಮ್ನೋ ಧನಂ ॥
ವಂಶಃ ಕೋ ವಿದುರಸ್ಯ ಯಾದವಪತೇರುಗ್ರಸ್ಯ ಕಿಂ ಪೌರುಷಂ ।
ಭಕ್ತ್ಯಾ ತುಷ್ಯತಿ ಕೇವಲಂ ನ ಚಗುಣೈಃ ಭಕ್ತಪ್ರಿಯೋ ಮಾಧವಃ ॥

–ವ್ಯಾಧನ ವೃತ್ತಿ ಎಂತಹುದು, ಧ್ರುವನಿಗೆ ಯಾವ ವಯಸ್ಸಾಗಿತ್ತು, ಗಜೇಂದ್ರನಿಗೆ ಯಾವ ವಿದ್ಯೆ ಇತ್ತು, ಕುಬ್ಜೆಗೆ ಯಾವ ರೂಪವಿತ್ತು, ಸುಧಾಮನಿಗೆ ಯಾವ ಧನವಿತ್ತು, ವಿದುರನದು ಯಾವ ವಂಶ, ಯಾದವ ಉಗ್ರಸೇನನಿಗೆ ಯಾವ ಪೌರುಷವಿತ್ತು. ಭಕ್ತಪ್ರಿಯನಾದ ಮಾಧವನು ಭಕ್ತಿಯಿಂದ ಮಾತ್ರ ತುಷ್ಟನಾಗುತ್ತಾನೆ ವಿನಹಾ ಮೇಲಿನ ಗುಣಗಳಿಂದಲ್ಲ.

## ಯುವವಾಣಿ

ಯೇಷಾಂ ಶಾಸ್ತ್ರಾನುಗಾಬುದ್ಧಿಃ
ನತೇ ಮುಹ್ಯಂತಿ ಭಾರತ

(ಯಾರ ಬುದ್ಧಿಯು ಶಾಸ್ತ್ರವನ್ನನುಸರಿಸುತ್ತದೆಯೋ ಅವರು ಕ್ರೋಧ ಮೋಹಗಳಿಂದ ಭ್ರಾಂತರಾಗುವುದಿಲ್ಲ)

ಭವಿತವ್ಯಂ ತಥಾ ತಜ್ಞ ನಾನು
ಶೋಚಿತುಮರ್ಹತಿ
ದೈವಂ ಪ್ರಜ್ಞಾವಿಶೇಷಣ
ಕೋ ನಿವರ್ತಿತುಮರ್ಹತಿ ||

(ಹೇಗಾಗಬೇಕೋ ಹಾಗೆಯೇ ಆಗುವುದು. ಆದುದರಿಂದ ಆ ವಿಷಯವನ್ನು ಯೋಚಿಸಬಾರದು. ವಿಶೇಷವಾದ ಬುದ್ಧಿವಂತಿಕೆಯಿಂದಲೂ ವಿಧಿನಿಯಮವನ್ನು ಮೀರಲಾಗುವುದಿಲ್ಲ.)

ವಿಧಾತೃವಿಹಿತಂ ಮಾರ್ಗಂ
ನಕಶ್ಚಿದತಿ ವರ್ತತೆ
ಕಾಲಮೂಲಮಿದಂ ಸರ್ವಂ
ಭಾವಾ ಭಾವೌ ಸುಖಾಸುಖೌ ||

(ಬ್ರಹ್ಮನಿಂದ ನಿಯತವಾದ ಮಾರ್ಗವನ್ನು ಮೀರಲು ಯಾರಿಂದಲೂ ಸಾಧ್ಯವಿಲ್ಲ. ಹುಟ್ಟು ಸಾವು, ಸುಖದುಃಖ ಎಲ್ಲದಕ್ಕೂ ಕಾಲವೇ ಮೂಲವಾಗಿರುತ್ತದೆ.)

ಕಾಲೋ ಹಿ ಸೃಜತೇ(ಕುರುತೇ)ಭಾವಾರ್
ಸರ್ವಲೋಕೇ ಶುಭಾಶುಭಾರ್
ಕಾಲಃ ಸಂಕ್ಷಿಪತೇ ಸರ್ವಾಃ
ಪ್ರಜಾಃ ವಿಸೃಜತೇ ಪುನಃ ||

(ಕಾಲವು ಸರ್ವಲೋಕಗಳಲ್ಲಿಯೂ ಶುಭಾಶುಭಗಳನ್ನು ಕೊಡುತ್ತದೆ. ಸರ್ವ ವಸ್ತುಗಳನ್ನೂ ನುಂಗಿ ಹಾಕುತ್ತದೆ. ಪುನಃ ಅವುಗಳನ್ನು ಸೃಷ್ಟಿವ್ಯಾಜದಿಂದ ಹೊರಗೆ ಹಾಕುತ್ತದೆ.)

ಕಾಲಃ ಸುಪ್ತೇಷು ಜಾಗರ್ತಿ ಕಾಲೋಹಿ
ದುರತಿ ಕ್ರಮಃ
ಕಾಲಃ ಸರ್ವೇಷು ಭೂತೇಷು ಚರತ್ಯ
ವಿಹೃತಃ ಸಮಃ ||

(ಸಕಲ ಪ್ರಾಣಿಗಳೂ ಮಲಗಿ ನಿದ್ರೆಹೋಗುತ್ತಿರುವಾಗಲೂ ಕಾಲವು ಎಚ್ಚರವಾಗಿಯೇ ಇರುತ್ತದೆ. ಆದುದರಿಂದ ಕಾಲವನ್ನು ಮೀರಿ ನಡೆಯಲು ಯಾರಿಗೂ ಶಕ್ಯವಿಲ್ಲ. ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಕಾಲವು ಯಾವ ವ್ಯತ್ಯಾಸವೂ ಇಲ್ಲದೆ ನಡೆದುಕೊಳ್ಳುತ್ತದೆ. ಎಲ್ಲವೂ ವಿಧಿನಿರ್ಮಿತವಾದುದು.)

ಯಃ ಪರೇಷಾಂ ಪರೋನಿತ್ಯಂ ಅತಿ
ವಾದಾಂಸ್ತಿತೀಕ್ಷತೆ ।
ದೇವಯಾನಿ ವಿಜಾನೀಹಿ ತೇನ
ಸರ್ವ ಮಿದಂ ಜಗತ್ ||

(ಇತರರಾಡುವ ನಿಂದೆಯ ವಾಕ್ಯಗಳನ್ನು ಯಾವನು ಲಕ್ಷಿಸುವುದಿಲ್ಲವೋ ಅಂತಹವನು ಮೂರು ಲೋಕವನ್ನು ಜಯಿಸಲು ಸಮರ್ಥನಾಗುತ್ತಾನ.)



# ಮಹಾಭಾರತದ ಸುಭಾಷಿತಗಳು

ಡಾ|| ಎನ್. ಅನಂತರಂಗಾಚಾರ್

ಯಃ ಸಮುತ್ಪತಿತಂ ಕ್ರೋಧ ಮ
ಕ್ರೋಧೇನ ನಿರಸ್ಯತಿ
ದೇವಯಾನಿ ವಿಜಾನೀಹಿ ತೇನ
ಸರ್ವ ಮಿದಂ ಜಗತ್ ||

(ವಿಷಮ ಸನ್ನಿವೇಶಗಳಲ್ಲುಂಟಾಗಬಹುದಾದ ಕ್ರೋಧವನ್ನು ಯಾವನು ಕ್ಷಮಾಗುಣದಿಂದ ತಡೆಹಿಡಿಯುತ್ತಾನೋ ಅಂತಹವನೇ ಸರ್ವ ಜಗತ್ತನ್ನು ಜಯಿಸಲು ಅರ್ಹನಾಗುತ್ತಾನೆ.)

ಯಃ ಸಂಧಾರ್ಯತೇ ಮನ್ಯುಂ ಯೋsತಿ
ವಾದಾಂಸ್ತಿತೀಕ್ಷತೆ
ಯ ಶ್ಚತಪ್ತೋ ನ ತಪತಿ ದೃಢಂ
ಸೋರ್ಥಸ್ಯ ಭಾಜನಂ ||

(ಯಾವನು ಸಂದರ್ಭಾನುಸಾರವಾಗಿ ಬಂದ ಕೋಪವನ್ನು ತಡೆಹಿಡಿಯುತ್ತಾನೆಯೋ ಯಾವನು ನಿಂದೆಗೆ ಲಕ್ಷ್ಯಕೊಡುವುದಿಲ್ಲವೋ ಮತ್ತು ಯಾವನು ಇತರರಿಂದ ತೊಂದರೆಯನ್ನನುಭವಿಸಿದರೂ ಮನಸ್ಸಿನಲ್ಲಿ ತಾಪವನ್ನು ತಂದುಕೊಳ್ಳುವುದಿಲ್ಲವೋ ಅಂಥವನಿಗೆ ನಾಲ್ಕು ಪುರುಷಾರ್ಥಗಳೂ ಸಿದ್ಧಿಸುವುವು.)

ಪುಮಾಂಸೋ ಯೇ ಹಿ ನಿಂದಂತಿ
ವೃತ್ತೇನಾಭಿ ಜನೇನ ಚ ।
ನತೇ ಷು ನಿವಸತ್ ಪ್ರಾಜ್ಞಃ
ಶ್ರೇಯಾ ಥೀ ಪಾಪಬುದ್ಧಿಷು ||

(ಯಾವನು ಇತರರ ಸದಾಚಾರವನ್ನು ಕುಲವನ್ನೂ ನಿಂದಿಸುತ್ತಾನೋ ಅಂತಹವನ ಆಶ್ರಯದಲ್ಲಿ ಪ್ರಾಜ್ಞನಾದವನೂ ಶ್ರೇಯೋಭಿಲಾಷಿಯೂ ಇರಬಾರದು.)

ನಹ್ಯತೋ ದುಷ್ಕರತರಂ ಮನ್ಯೇ
ಲೋಕೇಷ್ವಪಿ ತ್ರಿಷು
ಯಃ ಸಪತ್ನಶ್ರಿಯಂ ದೀಪ್ತಾಂ
ಹೀನಶ್ರೀಃ ಪರ್ಯುಪಾಸತೇ
ಮರಣಂ ಶೋಭನಂ ತಸ್ಯ ಇತಿ
ವಿದ್ವಜ್ಜನಾ ವಿದುಃ ||

(ದರಿದ್ರನಾದವನು ಐಶ್ವರ್ಯವಂತನಾದ ತನ್ನ ಶತ್ರುವನ್ನು ಸೇವೆಮಾಡುವುದಕ್ಕಿಂತಲೂ ದುಷ್ಕರವಾದದೂ ಸಹಿಸಲಸಾಧ್ಯವಾದುದೂ ಈ ಮೂರುಲೋಕಗಳಲ್ಲಿಯೂ ಮತ್ತೊಂದಿಲ್ಲ. ಅದಕ್ಕಿಂತಲೂ ಮರಣವು ಶುಭಕರವಾದುದು.

## ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ನಾಧರ್ಮಶ್ಚರಿತೋ ರಾಜನ್
ಸದ್ಯಃ ಫಲತಿ ಗೌರಿವ
ಶನೈರಾವರ್ತ್ಯ ಮಾನೋಹಿ ಕರ್ತು
ರ್ಮೂಲಾನಿ ಕೃಂತತಿ ||

(ಬೀಜವನ್ನು ಬಿತ್ತಿದ ಕಾಲದಲ್ಲಿಯೇ ಪಾಪವು ಫಲವನ್ನು ಕೊಡುವುದಿಲ್ಲ. ಕಾಲಕ್ರಮದಲ್ಲಿ ಅಜ್ಞಾತವಾಗಿ ಪಾಪಕರ್ಮಿಯ ಕುಲವನ್ನೇ ನಾಶಮಾಡುತ್ತದೆ.)

ನನರ್ಮಯುಕ್ತಂ ವಚನಂ ಹಿನಸ್ತಿ
ನಸ್ತ್ರೀಷುರಾಜನ್ ನ ವಿವಾಹಕಾಲೇ
ಪ್ರಾಣಾತ್ಯಯೇ ಸರ್ವಧನಾಪಹಾರೇ
ಪಂಚಾನೃತಾನ್ಯಾಹುರಪಾತಕಾನಿ ||

(ಹಾಸ್ಯಕ್ಕಾಗಿ ಸುಳ್ಳುಹೇಳಬಹುದು, ಸ್ತ್ರೀಯರೊಡನೆ ವಿಹರಿಸುವಾಗ ಅವರ ಸಂತೋಷಕ್ಕಾಗಿ ಸುಳ್ಳುಹೇಳಬಹುದು. ವಿವಾಹ ಸಂದರ್ಭದಲ್ಲಿ, ಪ್ರಾಣಾಪಾಯವಾಗುವ ಕಾಲದಲ್ಲಿ ಅಪಾರನಷ್ಟವು ಸಂಭವಿಸುವಾಗ ಸುಳ್ಳು ಹೇಳಬಹುದು.)

ಪ್ರತಿಕೂಲಃ ಪಿತುರ್ಯಶ್ಚ ನ ಸಪುತ್ರಃ
ಸತಾಂ ಮತಃ

(ತಂದೆಯ ವಾಕ್ಯಪರಿಪಾಲನೆಮಾಡದವನು ಮಗನಾಗಲಾರನೆಂದು ಧರ್ಮಜ್ಞರ ಮತ.)

ಮಾತಾಪಿತ್ರೋರ್ವಚನ ಕೃದ್ಧಿತಃ
ಪಥ್ಯಶ್ಚ ಯಃ ಸುತಃ
ಸಪುತ್ರಃ ಪುತ್ರವದ್ಯಶ್ಚ ವರ್ತತೆ ಪಿತೃ
ಮಾತೃಷುಃ ||

(ಮಾತಾಪಿತೃಗಳ ವಚನ ಪರಿಪಾಲನೆ ಮಾಡುವವನೂ ಮಾತಾ ಪಿತೃಗಳಿಗೆ ಸುಖವನ್ನು ಬಯಸುವವನೂ ಅವರ ಆಜ್ಞೆಯಂತೆ ನಡೆಯುವವನೂ ಮಾತ್ರ ಸುಪುತ್ರನೆನಿಸುವನು.)

ಅಕ್ರೋಧನಃ ಕ್ರೋಧನೇಭ್ಯೋವಿಶಿಷ್ಟಃ
ತಥಾತಿತಿಕ್ಷುರತಿತಿಕ್ಷೋರ್ವಿಶಿಷ್ಟಃ
ಅಮಾನುಷೇಭ್ಯೋ ಮಾನುಷಾಶ್ಚ
ಪ್ರಧಾನಾಃ
ವಿದ್ವಾಂಸ್ತಥೈವಾವಿದುಷಃ ಪ್ರಧಾನಃ

(ಕೋಪವಿಲ್ಲದವನು ಕೋಪಿಷ್ಠನಿಗಿಂತ ಉತ್ತಮ, ಕ್ಷಮಾಶೀಲನು ಸಹನೆಯಿಲ್ಲದವನಿಗಿಂತ ಉತ್ತಮ. ಪ್ರಾಣಿಜಾತಿಯಲ್ಲಿ ಮನುಷ್ಯನು ಉತ್ತಮ: ವಿದ್ಯಾವಂತನು ವಿದ್ಯೆಯಿಲ್ಲದವನಿಗಿಂತ ಉತ್ತಮ.)

ಸದ್ಭಿಃ ಪುರಸ್ತಾದಭಿಪೂಜಿತಸ್ಯಾತ್
ಸದ್ಭಿಸ್ತಥಾ ಪೃಷ್ಠತೋ ರಕ್ಷಿತಸ್ಯಾತ್
ಸದಾ ಸತಾಮತಿವಾದಾಂಸ್ತಿತಿಕ್ಷೇತ್
ಸತಾಂವೃತ್ತಿಂ ಚಾದಧೀತಾರ್ಯವೃತ್ತಃ

(ಯಾವಾಗಲೂ ಸತ್ಪುರುಷರನ್ನೂ, ಧಾರ್ಮಿಕರನ್ನು, ತ್ಯಾಗಿಗಳನ್ನು, ಆದರ್ಶ ಪುರುಷರನ್ನಾಗಿ ಭಾವಿಸಬೇಕು. ನಮ್ಮ ಕಾರ್ಯವನ್ನು ಅವರ ಕಾರ್ಯಗಳೊಡನೆ ಹೋಲಿಸಿ ನಮ್ಮಲ್ಲಿರುವ ದೋಷಗಳನ್ನು ತಿದ್ದಿಕೊಳ್ಳಬೇಕು.)

ತಸ್ಮಾತ್ಸಾಂತ್ವಂ ಸದಾವಾಚ್ಯಂ
ನ ವಾಚ್ಯಂ ಪರುಷಂ ಕ್ವಚಿತ್
ಪೂಜ್ಯಾನ್ಸಂಪೂಜಯೇದ್ದದ್ಯಾತ್
ನ ಚ ಯಾಚೇತ್ ಕದಾಚನ ||

(ಯಾವಾಗಲೂ ಪ್ರಿಯವಾದ ಮಾತುಗಳನ್ನೇ ಆಡಬೇಕು ಕಟುವಾಕ್ಯಗಳನ್ನಾಡಬಾರದು. ಸಕಲರೊಡನೆಯೂ ಮೈತ್ರಿಯಿಂದಿರಬೇಕು ದೀನದಲಿತರಿಗೆ ದಾನಮಾಡಬೇಕು. ಯಾವಾಗಲೂ ಯಾರಿಂದಲೂ ಯಾಚನೆಮಾಡಬಾರದು. ಮಾನ್ಯರನ್ನು ಸನ್ಮಾನಿಸಬೇಕು. ಅಮಾನ್ಯರನ್ನು ಅವಮಾನಮಾಡಬಾರದು.)

ಸುಖಂ ಹಿ ಜಂತುಃ ಯದಿವಾಪಿ ದುಃಖಂ
ದೈವಾಧೀನಂ ವಿಂದತೇನಾತ್ಮಶಕ್ತ್ಯಾ
ತಸ್ಮಾದ್ದಿಷ್ಟಂ ಬಲವನ್ಮನ್ಯಮಾನೋ
ನಸಂಜ್ವರೇನ್ನಾಪಿ ಹೃಷ್ಯೇತ್
ಕಥಂಚಿತ್ ||

(ಪ್ರಾಣಿಗಳ ಸುಖದುಃಖಗಳೆರಡೂ ದೈವಾಧೀನಗಳಾದುವು. ಆತ್ಮ ಶಕ್ತಿಯಿಂದ ಪ್ರಾಪಂಚಿಕವಾದ ಸುಖದುಃಖಗಳನ್ನು ವಿಪರ್ಯಾಸಗೊಳಿಸುವುದು ಸಾಧ್ಯವಿಲ್ಲ. ಆದುದರಿಂದ ಮಾನವನು ಸುಖ ಬಂದಾಗ ಹಿಗ್ಗಲೂಬಾರದು. ಕಷ್ಟ ಬಂದಾಗ ತಗ್ಗಲೂ ಬಾರದು.)

(26 ನೇ ಪುಟ ನೋಡಿ)

# ಭಾರತ - ಚೀನಾ ಸಾಂಸ್ಕೃತಿಕ ಸಂಬಂಧ

ಕ್ರಿ. ಶ. 1962 ರಲ್ಲಿ ಭಾರತದ ಮೇಲೆ ಚೀನೀ ಆಕ್ರಮಣ ನಡೆಯುವವರೆಗೆ ಸಹಸ್ರಾರು ವರ್ಷಗಳಿಂದ ಭಾರತ ಮತ್ತು ಚೀನಾ– ಈ ಎರಡು ದೇಶಗಳ ಜನರ ಸಾಂಸ್ಕೃತಿಕ ಮತ್ತು ಧಾರ್ಮಿಕ ರೀತಿನೀತಿಗಳು ಸಮಾನವಾಗಿದ್ದವು. ಪ್ರಾಗೈತಿಹಾಸಿಕ ಕಾಲದಿಂದಲೂ ಈ ಎರಡು ಮಹಾನ್ ದೇಶಗಳೂ ಪರಸ್ಪರ ಸೌಹಾರ್ದ ಸಂಬಂಧವನ್ನಿಟ್ಟುಕೊಂಡಿದ್ದವು. ಭಾಸ್ಕರಾಚಾರ್ಯರ ಜ್ಯೋತಿಷ್ಯ ಗ್ರಂಥ, ಸಿದ್ಧಾಂತ ಶಿರೋಮಣಿಯ ಭುವನಕೋಶಾಧ್ಯಾಯದಂತೆ ಅಲ್ತಾಯಿ ಪರ್ವತದ ಸುತ್ತಲೂ ಇದ್ದ ಇಳಾವೃತ್ತವೇ ಸುವರ್ಲೋಕವೆಂದು ಹೆಸರುಳ್ಳ ದೇವತೆಗಳ ಆವಾಸಸ್ಥಾನವಾಗಿತ್ತು. ಅಲ್ತಾಯಿಯು "ಇಳಾಸ್ಥಾಯೀ" ಎಂಬ ಸಂಸ್ಕೃತಪದದ ಅಪಭ್ರಂಶ. ಹಾಗೆಯೇ ಟಿಬೆಟ್ "ತ್ರಿವಿಷ್ಟಪದ"ದ ಅಪಭ್ರಂಶ ಪದ ಚೀನೀ ಭಾಷೆಯಲ್ಲಿ "ತಿಎನ್‌ಷಾನ್" ಎಂದರೆ ದೇವಪರ್ವತವೆಂದು ಅರ್ಥವಾಗುತ್ತದೆ ವೈದಿಕ, ಪೌರಾಣಿಕ, ಕಿಂಪುರುಷ, ಹರಿವರ್ಷ ಮತ್ತು ಮಂಗದೇಶಗಳು ಶಿವ, ಇಂದ್ರ, ಯಮರ ವಾಸಸ್ಥಾನಗಳಾದ ಚೀನ ತರ್ತರಿ ಮತ್ತು ಮಂಗೋಲಿಯಾ ದೇಶಗಳಾಗಿದ್ದವು ಮನುಸ್ಮೃತಿಯ ಪ್ರಕಾರ ಚೀನೀ ರಾಜಮನೆತನದವರು ಮಿಶ್ರ ಕ್ಷತ್ರಿಯರಾಗಿದ್ದರು. ಚೀನದ ಐತಿಹ್ಯದಂತೆ ಅಲ್ಲಿಯ ರಾಜರು ದೇವಪುತ್ರರೆಂದೂ ದೇವರ ಪ್ರತಿನಿಧಿಗಳೆಂದೂ ಭಾವಿಸಲ್ಪಡುತ್ತಿದ್ದರು. ಮಹಾಭಾರತದಂತೆ ಕುರುಕ್ಷೇತ್ರದಲ್ಲಿ ಮಹಾಚೀನದ ಮಿತ್ರನಾದ ಅಸ್ಸಾಮಿನ ಭಗದತ್ತನು ಕೌರವರೊಡನೆ ಸೇರಿಕೊಂಡು ಪಾಂಡವರ ಮೇಲೆ ಯುದ್ಧಮಾಡಿದ್ದನು. ಶಕ್ತಿಮಂಗಲ ತಂತ್ರದಲ್ಲಿ ಮಹಾಚೀನವು ಪ್ರಾಚೀನ ಬೃಹದ್ಭಾರತದ ರಥಕ್ರಾಂತಕ್ಕೆ ಸೇರಿದ್ದ ಭಾಗವಾಗಿತ್ತೆಂದು ಉಲ್ಲೇಖವಿದೆ.

ಪಾಶ್ಚಾತ್ಯರ ಅಧೀನದಲ್ಲಿದ್ದವರು ಬರೆದಿರುವ ಭಾರತೀಯ ಇತಿಹಾಸಗಳಲ್ಲಿ ಇವುಗಳ ಸುದ್ದಿಯೇ ಇಲ್ಲ. ಭಾರತೀಯ ಇತಿಹಾಸದ ಗ್ರಂಥಗಳಲ್ಲಿ ಫಾಹಿಯಾನ್ ಇತ್ಸಿಂಗ್ ಮತ್ತು ಯುಆನ್ ಚ್ವಾಂಗ್ ಎಂಬ ಮೂರು ಚೀನೀ ಯಾತ್ರಿಕರು ಮಾಡಿದ ಭಾರತದ ಸಂಚಾರವನ್ನು ವಿವರಿಸಿರುವುದು ಕಂಡುಬರುತ್ತದೆಯೇ ಹೊರತು ನೂರಾರು ವರ್ಷಗಳ ಕಾಲ ಭಾರತದಿಂದ ಚೀನಾದಲ್ಲಿ ಹೋಗಿ ನೆಲೆಸಿ, ಅಲ್ಲಿಯ ಆಶ್ರಮಗಳಲ್ಲಿ ಸಹಸ್ರಾರು ಭಾರತೀಯ ಧಾರ್ಮಿಕ ಹಾಗೂ ಶಾಸ್ತ್ರಗಳ ಗ್ರಂಥಗಳನ್ನು ಚೀನೀಭಾಷೆಗೆ ಭಾಷಾಂತರಿಸಿ ಈ ಎರಡು ದೇಶಗಳಲ್ಲೂ ಸಮಾನವಾದ ಸಂಸ್ಕೃತಿಯನ್ನು ಹರಡಿದ ಲೆಕ್ಕವಿಲ್ಲದಷ್ಟು ಭಾರತೀಯ ವಿದ್ವಾಂಸರ ವಿಚಾರವನ್ನು ಸೂಚಿಸಲೂ ಹಿಂಜರಿದಿರುವುದು ಶೋಚನೀಯ.

ಕ್ರಿಸ್ತಶಕ ಎಂಟು, ಒಂಬತ್ತನೆಯ ಶತಮಾನದವರೆಗೆ ಮಧ್ಯ ಏಷ್ಯಾದ ರಾಜ್ಯಗಳಾದ ಬಾಹ್ಲಿಕ ಖೋತಾನ್ (ಗೋದಾನ) ಕಾರಾಶಹರ್ (ಅಗ್ನಿದೇಶ) ಕುಶೀನಗರ,ಉಚ್ಚತುರ್‌ಫಾನ್, ತಕ್ಷಶಿಲಾ, ಕಾಶ್ಮೀರ ಮತ್ತು ಅಫ್ಘಾನಿಸ್ಥಾನಗಳಲ್ಲಿದ್ದ ಭಾರತೀಯ ರಾಜ್ಯಗಳ ಮೂಲಕ ಭಾರತ ಮತ್ತು ಚೀನಾಗಳ ಭೂಮಾರ್ಗಗಳು ಅಲ್ಲಿಯ ಸಂಸ್ಕೃತ ಮತ್ತು ಬೌದ್ಧ ಧರ್ಮದ ಕೇಂದ್ರಗಳ ಮೂಲಕ ಸಂಪರ್ಕಗೊಂಡಿದ್ದವು. ಖೋತಾನಿನ ಗೋಮತೀವಿಹಾರ ಕುಶೀನಗರ ಮತ್ತು ಚೀನಾದ ಎಲ್ಲೆಯ ಹತ್ತಿರವಿದ್ದ ಅಜಂತಾವನ್ನು ಹೋಲುವ ಸಹಸ್ರಬುದ್ಧರ ಗುಹಾಂತರ್ಗತ ವಿಹಾರಗಳಲ್ಲಿ ಮಧ್ಯಏಷ್ಯಾ ಹಾಗೂ ಚೀನೀ ವಿದ್ಯಾರ್ಥಿಗಳು ಸಂಸ್ಕೃತ ಮತ್ತು ಪಾಲೀಭಾಷಾಸಾಹಿತ್ಯಗಳನ್ನೂ ಬೌದ್ಧ ಧರ್ಮವನ್ನೂ ಅಧ್ಯಯನ ಮಾಡುತ್ತಿದ್ದರು. ಅಶೋಕನ ಮಗ ಕುಣಾಲನು ಖೋತಾನಿನ ಮೊದಲನೆಯ ರಾಜನಾದನು. ಆತನ ವಂಶದವರು ಅಲ್ಲಿ ಯುಆನ್‌ಚ್ವಾಂಗನ ಭಾರತದ ಯಾತ್ರೆಯ ಸಮಯದಲ್ಲೂ ಆಳುತ್ತಿದ್ದರು. ಕುಶೀನಗರದ ಸುವರ್ಣಪುಷ್ಪ,ಹರದೇವ, ಸುವರ್ಣದೇವ ಮೊದಲಾದ ರಾಜರೂ ಖೋತಾನಿನ ರಾಜರೂ ಭಾರತೀಯ ಸಾಹಿತ್ಯ ಮತ್ತು ಭಾಷೆಗಳ ಪ್ರಚಾರಕರಾಗಿದ್ದರು. ಪರ್ಶಿಯಾ, ಬ್ಯಾಕ್ಟ್ರಿಯಾ, ಸಾಗ್ಡಿಯಾನ, ಖೋತಾನ, ಕುಶೀನಗರ ಮತ್ತು ಚೀನಾವಿನ ವಿದ್ವಾಂಸರೂ ಕಲೆತು ಬಾಹ್ಲಿಕದ ನವಸಂಘಾರಾಮದಲ್ಲೂ ಕಾಬೂಲ್ ಮತ್ತು ಬಾಹ್ಲಿಕದ ಮಧ್ಯೆ ಇರುವ ಬಾಮಿಯಾನ್‌ನ ನವ ಬಿಹಾರದಲ್ಲೂ ಬೌದ್ಧಧರ್ಮ ಗ್ರಂಥಗಳ ಸಂಗ್ರಹ, ಟೀಕಾ ಟಿಪ್ಪಣಿಗಳ ರಚನೆ, ಪ್ರವಚನ ಮತ್ತು ಭಾಷಾಂತರ ಮುಂತಾದ ಕಾರ್ಯಗಳಲ್ಲಿ ನಿರತರಾಗಿದ್ದರು. ಏಳನೆಯ ಶತಮಾನದ ಕೊನೆಯಲ್ಲಿ ಮುಸ್ಲಿಂ ಆಕ್ರಾಮಕರು ಅಲ್ಲಿಯ ಬೌದ್ಧವಿಹಾರಗಳನ್ನು ನೆಲಸಮ ಮಾಡಿ ಪುಸ್ತಕಗಳನ್ನೆಲ್ಲಾ ಸುಟ್ಟು ಅಲ್ಲಿಯ ವಿದ್ವಾಂಸರನ್ನೂ ಜನಗಳನ್ನೂ ಬಲಾತ್ಕಾರದಿಂದ ಮಹಮ್ಮದೀಯರನ್ನಾಗಿ ಮಾಡಿದರು. ಹೀಗೆ ಮತಾಂತರಗೊಳಿಸಲ್ಪಟ್ಟ ನವ ಬಿಹಾರದ ಪ್ರಮುಖ ಪುರೋಹಿತರಾದ ಬರಮಕರೂ ಅವರ ವಂಶಸ್ತರೂ ಬಾಗ್ದಾದಿನ ಖಲೀಫನ ಆಸ್ಥಾನದಲ್ಲಿ ಭಾರತೀಯ ಗಣಿತ, ರಸಾಯನಶಾಸ್ತ್ರ, ಜ್ಯೋತಿಷ್ಯ, ಆಯುರ್ವೇದ ಇತ್ಯಾದಿ ಶಾಸ್ತ್ರಗ್ರಂಥಗಳನ್ನು ಅರಬ್ಬೀಭಾಷೆಗೆ ಭಾಷಾಂತರಿಸಲು ನೇಮಿಸಲ್ಪಟ್ಟರು. ಆಗಿನಿಂದ ಕ್ರಮೇಣ ಈ ಮಾರ್ಗವಾಗಿ ಭಾರತ ಮತ್ತು ಚೀನಾದ ಸಂಪರ್ಕ ನಿಂತುಹೋಯಿತು.

ಚೀನಾದಲ್ಲಿ ಭಾರತೀಯ ವಿದ್ವಾಂಸರು ಮಾಡಿದ ಸಾಹಿತ್ಯರಚನೆಯ ಸಿಂಹಾವಲೋಕನ ಹಾಗೂ ಅಲ್ಲಿನ ಮತ್ತು ಭಾರತೀಯ ಸಾಮಾಜಿಕ, ಸಾಂಸ್ಕೃತಿಕ ಹಾಗೂ ಧಾರ್ಮಿಕ ರೀತಿನೀತಿಗಳ ಏಕರೂಪತೆಯ ಸಂಕ್ಷಿಪ್ತ ಪರಿಚಯ ಪಡೆಯಬಹುದು.

---

ಡಾ॥ ಎಸ್. ವೇಣು ಗೋಪಾಲಾಚಾರ್ಯ

---

ಕಾನಿಷ್ಕನು ಪುರುಷಪುರದಲ್ಲಿ ಏರ್ಪಡಿಸಿದ್ದ ಮೂರನೆಯ ಬೌದ್ಧವಿದ್ವಾಂಸರ ಮಹಾಸಭೆಗೆ ಬಂದಿದ್ದ ಚೀನೀ ರಾಯಭಾರಿಯಿಂದ ಬೌದ್ಧ ಧರ್ಮದ ಮಹಾಯಾನ ಸಂಪ್ರದಾಯದ ಮಹತ್ವವು ಚೀನೀಯರಿಗೆ ಮನವರಿಕೆಯಾಯಿತು. ಎಲ್ಲರಿಗೂ ತಿಳಿದಿರುವಂತೆ ನಾಗಾರ್ಜುನನು ಪ್ರಚಾರಮಾಡಿದ ಮಹಾಯಾನ ಬೌದ್ಧಸಂಪ್ರದಾಯವು ವೈಷ್ಣವ ಭಕ್ತಿಯಿಂದ ಪೂರ್ಣವಾಗಿ ಪ್ರಭಾವಗೊಂಡಿದೆ. ಕ್ರಿಸ್ತಶಕಾರಂಭದಲ್ಲಿದ್ದ ವಿದರ್ಭ ದೇಶದ ನಾಗಾರ್ಜುನನೆಂಬ ಬ್ರಾಹ್ಮಣ ವಿದ್ವಾಂಸನು ಬೌದ್ಧದರ್ಶನವನ್ನು ಕ್ರೋಢೀಕರಿಸಿ ಗೌತಮ ಬುದ್ಧನನ್ನು ವಿಷ್ಣುವಿನ ಅವತಾರವೆಂದು ಸ್ವೀಕರಿಸಿದನು. ಆರಂಭದಲ್ಲಿ ಬೌದ್ಧರು ಬೋಧಿಸತ್ತ್ವ ಪದ್ಮಪಾಣಿಯನ್ನು ಅವಲೋಕಿತೇಶ್ವರ ಹಾಗೂ ವಿಷ್ಣುವೆಂದೂ, ಮಂಜುಶ್ರೀಯನ್ನು ಮಹೇಶ್ವರನೆಂದೂ, ವಜ್ರಪಾಣಿಯನ್ನು ಇಂದ್ರನೆಂದೂ ಭಾವಿಸುತ್ತಿದ್ದರು. ಅವರು ಬ್ರಾಹ್ಮಣರಿಂದ ತಮ್ಮ ಮನೆಗಳಲ್ಲಿ ದೇವರ ಪೂಜೆ ಮತ್ತು ಜಯಂತಿಗಳನ್ನು ನಡೆಸುತ್ತಿದ್ದರು. ಬೌದ್ಧ ಶ್ರಮಣರು ಸನ್ಯಾಸಿಗಳಾಗಿದ್ದು ಗೃಹಸ್ಥರಿಂದ ದೂರವಿರುತ್ತಿದ್ದುದರಿಂದ ಮಹಮ್ಮದೀಯ

ಆಕ್ರಾಮಕರು ವಿಹಾರಗಳನ್ನು ಧ್ವಂಸಮಾಡಲು ಭಾರತದಲ್ಲಿ ಬೌದ್ಧಧರ್ಮ ಅಂತ್ಯಗೊಂಡಿತು. ಕ್ರಿಸ್ತಶಕ 64ರಲ್ಲಿ ಚೀನದ ಚಕ್ರವರ್ತಿಯಾದ ಹ್ಯಾನ್ ಅಥವಾ ಶೈಲೇಂದ್ರವಂಶದ ಮಿಂಗ್‌ಡೀ ಕಳುಹಿಸಿದ್ದ ರಾಯಭಾರಿಗಳು ಕ್ರಿ. ಶ. 67ರಲ್ಲಿ ಬೌದ್ಧಧರ್ಮದ ಮಹಾಪಂಡಿತರಾದ ಕಶ್ಯಪ ಮಾತಂಗ ಮತ್ತು ಧರ್ಮರಕ್ಷ ಎಂಬುವರನ್ನು ಚೀನೀಚಕ್ರವರ್ತಿಯ ಹತ್ತಿರ ಕರೆದುಕೊಂಡು ಹೋದರು. ಈ ವಿದ್ವಾಂಸರು ಅನೇಕ ಬೌದ್ಧ ಧರ್ಮದ ಉದ್ಗ್ರಂಥಗಳನ್ನು ಬಿಳೀಕುದುರೆಗಳ ಮೇಲೆ ಹೇರಿಕೊಂಡು ಬಂದಿದ್ದರಿಂದ ಅವರಿಗೆ ವಾಸಿಸಲು ಬಿಳೀ ಕುದುರೆಯ ವಿಹಾರವೆಂಬ ಒಂದು ದೊಡ್ಡ ಆಶ್ರಮವನ್ನು ಚೀನೀ ಚಕ್ರವರ್ತಿಯು ಕಟ್ಟಿಸಿಕೊಟ್ಟನು. ಚೀನಾದ ದಾವ್ ಮತ್ತು ಕಾನ್‌ಫ್ಯೂಷಿಯನ್ ಧರ್ಮಗಳ ಮುಖ್ಯ ವಿದ್ವಾಂಸರನ್ನು ಇವರು ವಾದದಲ್ಲಿ ಸೋಲಿಸಿದ್ದರಿಂದ ಮಿಂಗ್‌ಡೀ ಬೌದ್ಧಧರ್ಮವನ್ನು ಸ್ವೀಕರಿಸಿ ಆ ಧರ್ಮವನ್ನು ಚೀನಾದಲ್ಲಿ ಹರಡಲು ಉತ್ತೇಜನಕೊಟ್ಟನು. ಇವರು ಚೀನಾದ ಬೌದ್ಧ ಧರ್ಮಿಗಳ ಉಪಯೋಗಕ್ಕಾಗಿ ರಚಿಸಿದ ನಲವತ್ತೆರಡು ಅಧ್ಯಾಯಗಳುಳ್ಳ ಚೀನೀಗ್ರಂಥವು ಬಹಳ ಜನಪ್ರಿಯವಾಯಿತು. ಇದರ ಮಂಗೋಲಿಯನ್ ಮತ್ತು ಟಿಬೆಟನ್ ಪ್ರತಿಗಳು ಇಂದೂ ಇವೆ. ಆಗಿನಿಂದ ಭಾರತೀಯ ವಿದ್ವಾಂಸರನ್ನು ಚೀನಾಗೆ ಕರೆಸಿ ಅವರಿಗಾಗಿ ಆಶ್ರಮಗಳನ್ನು ಕಟ್ಟಿಸಿ ಅಲ್ಲಿ ಬೌದ್ಧಧರ್ಮದ ಹಾಗೂ ಸಂಸ್ಕೃತ ಮತ್ತು ಪಾಲೀಭಾಷೆಯ ಗ್ರಂಥಗಳನ್ನು ಚೀನೀಭಾಷೆಗೆ ಭಾಷಾಂತರ ಮಾಡಿಸುವ ಕಾರ್ಯವು ಕ್ರಿಸ್ತಶಕ ಹತ್ತು ಹನ್ನೊಂದನೆಯ ಶತಮಾನದವರೆಗೆ ಮುಂದುವರಿಯಿತು. ಈ ಅವಧಿಯಲ್ಲಿ ನೂರಾರು ಭಾರತೀಯ ಬ್ರಾಹ್ಮಣ ಮತ್ತು ಬೌದ್ಧವಿದ್ವಾಂಸರಿಂದ ಭಾಷಾಂತರ ಹೊಂದಿದ ಸಹಸ್ರಾರು ಭಾರತೀಯ ಧಾರ್ಮಿಕ, ಸಾಂಸ್ಕೃತಿಕ ಮತ್ತು ಶಾಸ್ತ್ರದ ಗ್ರಂಥಗಳು ಚೀನೀಯರ ಮೇಲೆ ಶಾಶ್ವತ ಪ್ರಭಾವ ಬೀರಿದವು. ವಿಸ್ತಾರ ಭಯದಿಂದ ಕೆಳಗೆ ಕಾಲಕ್ರಮವಾಗಿ ಚೀನಾದ ಕೆಲವು ಮುಖ್ಯ ಭಾರತೀಯ ವಿದ್ವಾಂಸರು ಮತ್ತು ಅವರ ಕೃತಿಗಳನ್ನು ಮಾತ್ರ ತಿಳಿಸಿದೆ. ಕ್ರಿ. ಶ. 68 ರಿಂದ 70ರ ವರೆಗೆ ಧರ್ಮರಕ್ಷಣ, ವಿನಯಧರ್ಮದ ಬುದ್ಧ ಚರಿತ ಸೂತ್ರ, ಧರ್ಮಸಮುದ್ರ ಕೋಶ ಸೂತ್ರ, ದಶಭೂಮಿ, ಕೇಶಭೇದಿಕಾಸೂತ್ರ ಮೊದಲಾದ ಸಂಸ್ಕೃತ ಗ್ರಂಥಗಳ ಚೀನೀ ಭಾಷಾಂತರವಾದವು.

ಕ್ರಿಸ್ತಶಕ 2–3 ರಲ್ಲಿ ಮಹಾಬಲ (ಚೌತಾಲೀ) ಧರ್ಮಕಾಲ, ವಿಘ್ನ, ಚಾಲೂಯೆನ್, ಧರ್ಮಪಾಲ, ಕಲ್ಯಾಣಗಣ, ಕಲ್ಯಾಣ, ಗೋರಕ್ಷ ಮುಂತಾದ ವಿದ್ವಾಂಸರಿಂದ ಭಾಷಾಂತರಗೊಂಡ ಪ್ರತಿಮೋಕ್ಷ ಧರ್ಮಪದಸೂತ್ರ, ಮಾತಂಗ ಸೂತ್ರ ಮೊದಲಾದವು

ಕ್ರಿಸ್ತಶಕ 250 ರಲ್ಲಿ ಚೀನೀಚಕ್ರವರ್ತಿಯಿಂದ ಹೊಸದಾಗಿ ಕಟ್ಟಿಸಲ್ಪಟ್ಟ ಬುದ್ಧಗ್ರಾಮವೆಂಬ ಆಶ್ರಮದಲ್ಲಿ ಷಟ್‌ಪಾರಮಿತ, ಸನ್ನಿಪಾತಸೂತ್ರ, ಸಮ್ಯಕ್ಸ್ಮಾವಧಾನ ಮೊದಲಾದ ಗ್ರಂಥಗಳು ಸಂಸ್ಕೃತ ಪಾಲಿಯಿಂದ ಚೀನೀಭಾಷೆಗೆ ಭಾಷಾಂತರಿಸಲ್ಪಟ್ಟವು. ತೊಂಕಿನ್‌ನಗರದಲ್ಲಿ ಹುಟ್ಟಿದ ಸಂಘಭದ್ರ (ಗಾಂಗೈಂಗ್‌ಹ್ವೆಯಿಂದ)ನಿಂದ ನಾನ್‌ಕಿಂಗ್ ನಗರದಲ್ಲಿ ಕಟ್ಟಿಸಿದ ಒಂದು ದೊಡ್ಡ ಬೌದ್ಧವಿಹಾರವು ಮೂರು ಮತ್ತು ನಾಲ್ಕನೆಯ ಶತಮಾನಗಳಲ್ಲಿ ಕಾಶ್ಮೀರದ ಸಂಘಭೂತಿ, ಪುಣ್ಯತ್ರಾತ, ಧರ್ಮಯಶಸ್ ಮೊದಲಾದ ಅನೇಕ ಭಾಷಾಂತರಕಾರರ ಆಶ್ರಯಸ್ಥಾನವಾಗಿತ್ತು. ಬುದ್ಧಯಶಸ್ ಮತ್ತು ಅವನ ಶಿಷ್ಯ ವಿಮಲಾಕ್ಷ ಎಂಬುವರು ಕಾಶ್ಮೀರದಿಂದ ಕುಶೀನಗರ ಮತ್ತು ಕಾಷ್‌ಗರ್‌ನಿಂದ ಇಲ್ಲಿಗೆ ಬಂದು ಅಭಿಧರ್ಮದ ಅನೇಕ ಗ್ರಂಥಗಳನ್ನು ಅನುವಾದ ಮಾಡಿದರು. ಕಾಶ್ಮಿರದ ಮಹಾಪಂಡಿತ ಕುಮಾರಜೀವನು ಧರ್ಮರಕ್ಷ, ಗೌತಮ ಸಂಘದೇವ, ಬುದ್ಧಭದ್ರ ಸಂಘಭಟ್ಟ, ಧರ್ಮಪ್ರಿಯ ಮುಂತಾದ ವಿದ್ವಾಂಸರಿಂದ ಮಹಾಯಾನದ ನೂರಾರುಗ್ರಂಥಗಳನ್ನು ಮೂಲಗ್ರಂಥಗಳನ್ನೇ ಹೋಲುವಂತೆ ಚೀನೀ ಭಾಷೆಗೆ ಭಾಷಾಂತರ ಮಾಡಿಸಿದನು. ಇವುಗಳಲ್ಲಿ ಗೌತಮ ಸಂಘದೇವನ ಮಧ್ಯಮಾಗಮ ಸೂತ್ರ ಮತ್ತು ಅಭಿಧರ್ಮಹೃದಯಶಾಸ್ತ್ರವೂ, ಧರ್ಮರಕ್ಷನ ಮಾಯಾಕರ, ಭದ್ರಬುದ್ಧಿ ಮಾತ್ರ ಸೂತ್ರ, ನರಕಸೂತ್ರ, ಶೀಲಗುಣ ಗಂಧಸೂತ್ರ, ಶ್ರಾಮಣ್ಯಫಲಸೂತ್ರ, ಕಾಬೂಲಿನ ಸಂಘಭಟನ ವಿಭಾಷಾಸೂತ್ರ,ಆರ್ಯವಸುಮಿತ್ರನ ಬೋಧಿಸತ್ವ, ಸಂಗೀತಶಾಸ್ತ್ರ ಮತ್ತು ಬುದ್ಧಚರಿತಸೂತ್ರವೂ, ಧರ್ಮಪ್ರಿಯನ ದಶಸಹಸ್ರಿಕಾ,ಪ್ರಜ್ಞಾ ಪಾರಮಿತ, ಮೊದಲಾದವು ಅತ್ಯಂತ ಪ್ರಸಿದ್ಧವಾಗಿವೆ. ಇರಾನಿನ ಬೌದ್ಧ ವಿದ್ವಾಂಸರು ಮಧ್ಯ ಏಷ್ಯಾದಲ್ಲೆಲ್ಲಾ ಬೌದ್ಧಧರ್ಮದ ಪ್ರಚಾರ ನಡೆಸಿದರು. ಅಲ್ಲಿಯ ಎಲ್ಲಾ ರಾಜರಿಗೂ ಗುರುವಾಗಿದ್ದ ಮಹಾಯಾನದ ಸರ್ವಾಸ್ತಿವಾದದರ್ಶನ ಮತ್ತು ವಿನಯ ಪಿಟಕದ ಟೀಕಾಗ್ರಂಥ ರಚಿಸಿದ್ದ ಕುಮಾರ ಜೀವನಿಂದ ಈ ಯುಗಕ್ಕೆ 'ಕುಮಾರಜೀವ ಯುಗ' ವೆಂದೇ ಹೆಸರು ಬಂತು. ಕ್ರಿ. ಶ. 406 ರಲ್ಲಿ ಫಾಹಿಯಾನನು ಚೀನಾವಿಗೆ ಬರಮಾಡಿಕೊಂಡ

(25 ನೇ ಪುಟ ನೋಡಿ)

# ಚಿತ್ರಲೇಖನಸ್ಪರ್ಧೆ

ವಿದ್ಯಾರ್ಥಿಗಳಲ್ಲಿ ಧಾರ್ಮಿಕ ಸಾಹಿತ್ಯಕ ಆಸಕ್ತಿಗಳನ್ನು ಪ್ರೋತ್ಸಾಹಿಸಲು ಈ ಹೊಸಶೀರ್ಷಿಕೆಯನ್ನುಂಟು ಮಾಡಲಾಗಿದೆ. ಇದರಲ್ಲಿ ವಿದ್ಯಾರ್ಥಿಗಳು ಮಾತ್ರವೇ ಭಾಗವಹಿಸಬೇಕು. ಲೇಖನಗಳಲ್ಲಿ ಬಹುಮಾನಿತವಾದ ಲೇಖನವನ್ನು ಸಪ್ತಗಿರಿಯಲ್ಲಿ ಪ್ರಕಟಿಸಲಾಗುವುದು. ಒಂದು ವರ್ಷದ ಸಪ್ತಗಿರಿಯನ್ನು ಉಚಿತವಾಗಿ ನೀಡಲಾಗುವುದು. ಸ್ಪರ್ಧೆಯಲ್ಲಿ ಸಂಪಾದಕರದ್ದೇ ಕೊನೆಯ ನಿರ್ಣಯ.



ಮೇಲಿನ ಚಿತ್ರದ ಬಗ್ಗೆ ಲೇಖಗಳನ್ನು ಕಳುಹಿಸಲು ಕಡೆಯ ದಿನಾಂಕ ಜನವರಿ 15–1982

**ಪುರಂದರದಾಸ ಆರಾಧನಾ ವಿಶೇಷ**

# ದಾಸರ ಕೃತಿಗಳಲ್ಲಿ ಶ್ರೀರಾಮ

ರಾಮಾಯಣ, ಮಹಾಭಾರತ ಹಾಗೂ ಭಾಗವತ – ಈ ಕೃತಿತ್ರಯಗಳು ಹರಿದಾಸ ಸಾಹಿತ್ಯಕ್ಕೆ ಮೂಲಸ್ತಂಭಗಳು. ಅದರಲ್ಲೂ ಕನ್ನಡ ಆಂಧ್ರಸಾಹಿತ್ಯಗಳಲ್ಲಿ ರಾಮಾಯಣಕ್ಕೆ ಪ್ರಚಾರ ಜಾಸ್ತಿ. ಶ್ರೀಮನ್ಮಹಾವಿಷ್ಣುವಿನ ಅವತಾರಗಳಲ್ಲಿ ರಾಮಾವತಾರ ಒಂದು. ಮರ್ತ್ಯಲೋಕದಲ್ಲಿ ಹುಟ್ಟಿದವರಿಗೆ ಶ್ರೀರಾಮ ಆದರ್ಶ ಮೂರ್ತಿ. ಆದ್ದರಿಂದ ಹರಿದಾಸರ ಪದಗಳಲ್ಲಿ ರಾಮಾಯಣ ಪ್ರಸಂಗಗಳು ಬರುತ್ತವೆ. ಪುರಂದರದಾಸರು ಪ್ರಧಾನವಾಗಿ ವಿಠಲನ ಭಕ್ತರಾದರೂ ಅವರು, ಶ್ರೀರಾಮ, ನರಸಿಂಹ ಮೂರ್ತಿಗಳನ್ನು ಕುರಿತು ಭಕ್ತಿಯಿಂದ ಹಾಡಿದ್ದಾರೆ.

ಎಲ್ಲ ನಾಮಗಳಲ್ಲಿಯೂ ರಾಮನಾಮ ಶ್ರೇಷ್ಠವಾದದ್ದು. ಈ ಅಭಿಪ್ರಾಯವನ್ನು ದಾಸರು ಮಾತುಮಾತಿಗೆ ಹೇಳುತ್ತಾರೆ.

'ಪಶುಪತಿಗೆ ಪ್ರಿಯವಾದ ದಿವ್ಯಮಂತ್ರ'
'ರಾಮ ನಾಮವ ನುಡಿ ನುಡಿ'
'ಶ್ರೀರಾಮನ ನಾಮವ ಪಾಡುತಲಿರು'
'ನಿನ್ನ ನಾಮವಿದ್ದರೆ ಸಾಕೋ...
ಶ್ರೀರಾಮ'

'ರಾಮ ಎಂಬುವ ಎರಡು ಅಕ್ಷರದ ಮಹಿಮೆಯನು ಪಾಮರರು ತಾವೇನು ಬಲ್ಲರಯ್ಯ' ಎನ್ನುವ ಕೀರ್ತನೆಯಲ್ಲಿ ರಾ–ಮಾ ಅಕ್ಷರಗಳ ಫಲಗಳನ್ನು ಹೇಳಿದ್ದಾರೆ. 'ರಾ' ಎಂದ ಮಾತ್ರದೊಳು ರಕ್ತಮಾಂಸದೊಳಿದ್ದ ಆಯುಷ್ಯಗತವಾದ ಪಾಪಗಳು ಮಾಯವಾಗುತ್ತವೆ. 'ಮಾ' ಎಂದೆನಲು ಹೊರಬಿದ್ದ ಪಾಪಗಳು ಒಳ ಹೋಗದಂತೆ ಕವಾಟವಾಗಿ ಚಿತ್ತವನ್ನು ದೇಹವನ್ನು ಪವಿತ್ರಮಾಡುತ್ತದೆಂದು ರಾಮನಾಮವ ಹಿರಿಮೆಯನ್ನು ಹೇಳುತ್ತಾರೆ.

**ಡಾ॥ ಕೆ. ಸರ್ವೋತ್ತಮನ್.**

ದೇವತೆಗಳು ಮಂತ್ರಾಧೀನರು. ಮಂತ್ರೋಪಾಸನೆ ಶ್ರದ್ಧೆಯಿಂದ ಮಾಡತಕ್ಕದ್ದು. ಮಂತ್ರಗಳು ಅನೇಕ ರೂಪಗಳಲ್ಲಿ ಇರುತ್ತವೆ. ಎಲ್ಲ ಮಂತ್ರಗಳಲ್ಲಿಯೂ ರಾಮ ಮಂತ್ರ ಉನ್ನತವಾದದ್ದು.

"ರಾಮ ಮಂತ್ರವ ಜಪಿಸೋ ಮನುಜ
ಆ ಮಂತ್ರ ಈ ಮಂತ್ರ ಜಪಿಸಿ ಕೆಡಲು
ಬೇಡ"

ಎಂದು ಎಚ್ಚರಿಕೆ ನೀಡುತ್ತಾರೆ. ಅದಕ್ಕೆ ಆಧಾರವಾಗಿ ಸೋಮಶೇಖರ, ಮರುತಾತ್ಮಜ, ವಿಭೀಷಣ, ಆನಂದತೀರ್ಥರನ್ನು ಉದಾಹರಿಸಿ ಕುಲಹೀನನಾದರೂ ಕೂಗಿ ಜಪಿಸುವ ಮಂತ್ರವೆಂದು ಸುಲಭೋಪಾಯವನ್ನು ಸ್ಪಷ್ಟಪಡಿಸಿದ್ದಾರೆ.

ರಾಮನಾಮದ ಮಹಾತ್ಮ್ಯವನ್ನು ಆಲಂಕಾರಿಕವಾಗಿ ಹೇಳುವುದು ದಾಸರ ಮತ್ತೊಂದು ಪದ್ಧತಿ. 'ರಾಮನಾಮ ಪಾಯಸಕ್ಕೆ' ಎನ್ನುವ ಕೀರ್ತನೆಯಲ್ಲಿ ಕೃಷ್ಣನಾಮವನ್ನು ಸಕ್ಕರೆಯಾಗಿ, ವಿಠಲನಾಮವನ್ನು ತುಪ್ಪವಾಗಿ ಬಳಸಿಕೊಂಡಿದ್ದಾರೆ. ಅದೇ ರೀತಿ 'ರಾಮನಾಮ ರತ್ನ ಹಾರ ದೊರಕಿತು ಎನಗೆ' ಎನ್ನುವ ಕೀರ್ತನೆಯಲ್ಲಿ ದಶಾವತಾರಗಳ ಪ್ರಸ್ತಾಪನೆ ಮಾಡಿದ್ದಾರೆ. ಮತ್ತೊಂದು ಪದದಲ್ಲಿ 'ಶ್ರೀರಾಮನಾಮವೆಂಬೋ ಸಿಂಗಾಡಿ ತಕ್ಕೊಂಡು ಅರಿಷಡ್ವರ್ಗಗಳನ್ನು ವಧೆಮಾಡಬಹುದೆ'ಂದು ಉಪಾಯ



ಸೂಚಿಸುತ್ತಾರೆ. 'ಅವನಿಯೊಳು ಶ್ರೀರಾಮನೆಂಬೊ ಹಣ್ಣು ಕೊಳ್ಳಿರೋ' ಎನ್ನುವ ಕೀರ್ತನೆ ಆಲಂಕಾರಿಕವಾಗಿ ಹಾಡಿದ ಪದವಾಗುತ್ತದೆ.

ರಾಮಾಯಣದ ಕಥಾಭಾಗಗಳನ್ನು ಉಪಯೋಗಿಸಿಕೊಂಡು ರಾಮಮಹಿಮೆಯನ್ನು ಕೊಂಡಾಡುವುದು ಮತ್ತೊಂದು ಪದ್ಧತಿ. ಅವತಾರಗಳಲ್ಲಿ 'ಶ್ರೀರಾಮನು 'ಮಾಯಾಮಾನುಷವಿಗ್ರಹ'ದ ರೀತಿಗೆ ಸೇರುತ್ತಾನೆ. ಶ್ರೀಕೃಷ್ಣ 'ಲೀಲಾಮಾನುಷವಿಗ್ರಹ'ನೆಂದು ಹೇಳುತ್ತಾರೆ. ಶ್ರೀರಾಮನಿಗೆ ತಾನು ಅವತಾರಪುರುಷನೆನ್ನುವ ಜ್ಞಾನವಿಲ್ಲವೆಂದು ತಾತ್ಪರ್ಯ. ಆದರೆ ಸಮಯಬಂದಾಗ ಶ್ರೀರಾಮನಲ್ಲಿ ಅವತಾರಭಾವನೆ

ಕರ್ನಾಟಕದ ಸಂಗೀತದಲ್ಲಿ ದಾಸಸಾಹಿತ್ಯದಲ್ಲಿ, ಶ್ರೀನಿವಾಸನಾಯಕ ಪೂರ್ವನಾಮದ ಪುರಂದರದಾಸರದು ಚಿರಸ್ಥಾಯಿ ಹೆಸರು. ಧರ್ಮ, ಸಂಸ್ಕೃತಿ, ನಾಡು, ನುಡಿ, ಎಲ್ಲ ಕಡೆಯಿಂದಲೂ ಆತ್ಮದ ಒಳಿತು–ಉನ್ನತಿಗಾಗಿ ದುಡಿದ ಮಿಡಿದ, ಮಹಾಚೇತನ ಅವರದು. ಅಂತಹ ದಾಸಶ್ರೇಷ್ಠರ ಆರಾಧನೆ ಜನವರಿಯಲ್ಲಿ ಎಲ್ಲಡೆ ಭಕ್ತಿಯಿಂದಲೂ, ಗೌರವದಿಂದಲೂ ನಡೆಯುತ್ತದೆ. ದಾಸಶ್ರೇಷ್ಠರಾದ ಪುರಂದರರು ಪುರುಷೋತ್ತಮನ ಎರಡು ಮುಖಗಳನ್ನು–ಅವತಾರಗಳನ್ನು ಕಂಡ ಬಗೆಯನ್ನು ಕುರಿತ ಎರಡು ಲೇಖನಗಳ ಮೂಲಕ ಸಪ್ತಗಿರಿ ಆರಾಧನೆಯಲ್ಲಿ ಪಾಲುಗೊಳ್ಳುತ್ತಿದೆ.

ಪ್ರಕಾಶಮಾನವಾಗುತ್ತದೆ. ಇದಕ್ಕೆ ದೃಷ್ಟಾಂತವಾಗಿ ದಾಸರು ರಾಮರಾವಣ ಯುದ್ಧವನ್ನು ಪ್ರಸ್ತಾಪಿಸಿದ್ದಾರೆ.

"ಅಲ್ಲಿ ನೋಡಲು ರಾಮ
ಇಲ್ಲಿ ನೋಡಲು ರಾಮ
ಎಲ್ಲೆಲ್ಲಿ ನೋಡಿದರಲ್ಲಿ ರಾಮ
ರಾವಣನ ಮೂಲಬಲ ಕಂಡು ಕಪಿಸೇನೆ
ಆವಾಗಲೆ ಬೆದರಿ ಓಡಿದವು
ಆ ವೇಳೆ ನರನಾಗಿ ಇರಬಾರದೆಂದೆನಿಸಿ
ದೇವ ರಾಮಚಂದ್ರ ಜಗವೆಲ್ಲ ತಾನಾದ"

–ಇದೇ ರೀತಿ 'ಶ್ರೀರಾಮನು ನಂಬಿದವರಿಗೆ ಸಲಹುವ ದೊರೆ' ಎಂದು ಹಾಡಿದ್ದಾರೆ.

"ಯಮನೆಲ್ಲೋ ಕಾಣನೆಂದು ಹೇಳಬೇಡ
ಯಮನೇ ರಾಮಚಂದ್ರ ಸಂದೇಹಬೇಡ
-ನಂಬಿದ ವಿಭೀಷಣಗೆ ರಾಮನಾದ
ನಂಬದಿದ್ದ ರಾವಣನಿಗೆ ಯಮನೇ ಆದ"

–ಇದೇ ಪ್ರಕಾರವಾಗಿ ಶ್ರೀರಾಮನ ಮಹಿಮೆಯನ್ನು ಹೇಳುತ್ತಾ 'ವಿಧಿಯ ಮುಂದೆ ಯಾರ ಆಟವೂ ನಡೆಯದು' ಎಂದು ಸೀತಾಪಹರಣ ಪ್ರಸಂಗವನ್ನು ಮಾನವದೃಷ್ಟಿಯಿಂದ ನೋಡಿದ್ದಾರೆ.

"ನೃಪರೊಳಗೆ ಅತಿ ಶ್ರೇಷ್ಠ ಬಲವಂತ
ರಘುರಾಮ"
ಅಪರಿಮಿತ ಶೂರ ಲಕ್ಷ್ಮಣದೇವರು
ಜಲಜಾಕ್ಷಿ ಸೀತೆಯನು ಖಳನು
ಕದ್ದೊಯ್ವಾಗ
ವಿಪರೀತ ವೀರರಿದ್ದೇನ ಮಾಡಿದರು"?

ತತ್ತ್ವೋಪದೇಶ ದಾಸರ ಪದಗಳ ಜೀವಾಳ. ರಾಮನಾಮದ ಮಹಿಮೆ ಹೇಳುತ್ತಾ ದಾಸರು ಜನರಿಗೆ ವೈರಾಗ್ಯಭಾವವನ್ನು ಉಂಟುಮಾಡುತ್ತಾರೆ. ಇಂತಹ ಕೀರ್ತನೆಗಳಲ್ಲಿ ಭಜನ ಸಂಪ್ರದಾಯ ಹೆಚ್ಚು.

'ರಾಮ ರಾಮ ರಾಮ ಸೀತಾ ರಾಮ
ರಾಮ ಎನ್ನಿರೋ'
'ರಾಮ ರಾಮನೆನ್ನಿರೋ ನರಜನ್ಮ
ಸ್ಥಿರವಲ್ಲ'
"ರಾಮರಾಮೆನ್ನಿರೋ ಇಂಥ ಸ್ವಾಮಿಯ
ನಾಮವ ಮರೆಯದಿರೋ"
"ಜಯತು ಕೋದಂಡರಾಮ"

ಮಾನವಜನ್ಮವನ್ನು ಸಾರ್ಥಕ ಮಾಡಿಕೊಳ್ಳಬೇಕೆಂದು ದಾಸರ ಉಪದೇಶ. ಆದ್ದರಿಂದ;

" ಈಗ ಮಾಡಲೋ ರಾಮಧ್ಯಾನವ
ನೀ ಮೂಕ
ನಾಗಿರಬೇಡ ಎಲೆ ಮಾನವ
ಕಾಲನ ದೂತರು ಕರೆವಾಗ ನೀ
ಕಾಲಗೆಟ್ಟು ಕಣ್ಣ ಬಿಡುವಾಗ
ನಾಲಿಗೆ ಸೆಳಕೊಂಡು ಜ್ಞಾನ
ಗೆಟ್ಟಿರುವಾಗ
ನೀಲವರ್ಣನ ಧ್ಯಾನ ಬರುವುದೇನಯ್ಯ"
–ಎಂದು ಪ್ರಶ್ನೆ ಮಾಡುತ್ತಾರೆ.

'ಕಾಕಾಸುರನ ನೋಡು ಏಕಾಕ್ಷಿ
ಯಾದನು'

-ಎಂದು ಉದಾಹರಿಸಿ,'ಬೇಡ ಪರಸತಿ ಸ್ನೇಹ'ವೆಂದು ಎಚ್ಚರಿಕೆ ನೀಡುತ್ತಾರೆ.

ದಾಸರ ದಶಾವತಾರ ಪದಗಳಲ್ಲಿ, ಲಾಲಿ ಹಾಡುಗಳಲ್ಲಿ ಕೂಡ ರಾಮಾವತಾರ ಪ್ರಸಂಗಗಳು ಕಾಣಿಸುತ್ತವೆ ಮತ್ತು ಹನುಮಂತರಾಯನ ಕೀರ್ತನೆಗಳಲ್ಲಿ ಹೇಳಬೇಕಾಗಿಲ್ಲ.

'ಶರಧಿಗೆ ಸೇತು ಕಟ್ಟಿದವಗೆ ಲಾಲಿ'
'ಸಿಂಧುಬಂಧನ ರಾಮಚಂದ್ರನೇ ಜೋ'

"ವಾಸವಾನುಜ ಪರಶುವರಯೂಥ
ದಾಶರಥಿ ರಾಮಚಂದ್ರನಿಗೆ ಮಂಗಳಂ"

---

# ದಾಸರ ಕೃತಿಗಳಲ್ಲಿ ಕೃಷ್ಣ

—ಎ. ಎಸ್. ಪಂಕಜ. ಎಂ.ಎ,

'ದಾಸರೆಂದರೆ ಪುರಂದರದಾಸರಯ್ಯ' 'ನೀತಿಯೆಲ್ಲವನರಿತು ನಿಗಮ ವೇದ್ಯನ ನಿತ್ಯ ಮಾತು ಮಾತಿಗೆ ಬಿಡದೆ ವರ್ಣಿಸುತಲಿ, ಗೀತನರ್ತನದಿ ಶ್ರೀಕೃಷ್ಣನ ಪೂಜಿಸುವ ಪೂತಾತ್ಮದಾಸ ಪುರಂದರದಾಸರಯ್ಯ' ಎಂಬ ವ್ಯಾಸರಾಯರ ಸ್ತುತಿ ಸಾರ್ಥಕವಾಗಿದೆ. 'ದಾಸ ಶ್ರೇಷ್ಠ' ಎಂದು ಹೊಗಳಿಸಿಕೊಂಡ ಪುರಂದರದಾಸರು ಹಿರಿಯಭಕ್ತ, ಹಿರಿಯ ಹಾಡುಗಾರ. ಸಿರಿತನದ ಮಡಿಲಿನಲ್ಲಿ ಬೆಳೆದು ಯಾವುದೋ ಒಂದು ಪ್ರಸಂಗದಲ್ಲಿ ಎಲ್ಲವನ್ನೂ ತ್ಯಾಗ ಮಾಡಿ ಅವರು ಸ್ವೇಚ್ಛೆಯಿಂದ ಹರಿದಾಸರಾದರು. ಹೆಂಡತಿ ಮಕ್ಕಳೊಡನೆ ವಿಜಯನಗರಕ್ಕೆ ಬಂದು ವ್ಯಾಸರಾಯರಿಂದ ಮಂತ್ರೋಪದೇಶ ಪಡೆದು ದಾಸರಾದರು. ಅವರ ಮುಂದಿನ ಜೀವನವೆಲ್ಲ ಹರಿ ಸಮರ್ಪಿತವಾಯಿತು.

ವಿಷಯಾನುಗುಣವಾಗಿ ನಾಮ ಮಹಿಮೆ, ಹರಿಗುರುಗಳ ಸ್ಮರಣೆ–ಸ್ತುತಿ, ಅಂತರಂಗ ನಿವೇದನೆ, ಕೃಷ್ಣಲೀಲೆ, ಸಮಾಜ ವಿಮರ್ಶೆ, ಸಮಾಜ ಬೋಧನೆ ಹೀಗೆ ಸ್ಥೂಲವಾಗಿ ಪುರಂದರದಾಸರ ಕೀರ್ತನೆಗಳನ್ನು ವಿಭಾಗಿಸಬಹುದು. ಅಂತರಂಗದ ಕೀರ್ತನೆಗಳಲ್ಲಿ ಭಕ್ತ ಜೀವನದ ಬಯಕೆ–ಬೇಡಿಕೆಗಳು, ಕುಗ್ಗು ಕೊರತೆಗಳು ವ್ಯಕ್ತವಾಗಿದ್ದರೆ, ಕೃಷ್ಣಲೀಲೆಯ ಕೀರ್ತನೆಗಳಲ್ಲಿ ಭಾಗವತ ಪುರಾಣದ ಹಲವಾರು ಸನ್ನಿವೇಶಗಳು ತಲೆದೋರಿವೆ. ಶೃಂಗಾರ, ವಾತ್ಸಲ್ಯ ಹಾಸ್ಯರಸಗಳು ಹೊರ ಹೊಮ್ಮಿವೆ. ಇವುಗಳಲ್ಲಿ 'ಬಗೆ ಬಗೆ ಆಟಗಳೆಲ್ಲಿ ಕಲಿತಯ್ಯ ಜಗವ ಮೋಹಿಪನೆ', 'ಆಡಿದನು ರಂಗ ಅದ್ಭುತ ದಿಂದಲಿ ಕಾಳಿಂಗನ ಫಣೆಯಲಿ,' 'ಹೋಗದಿರ ಲೋರಂಗ ಬಾಗಿಲಿಂದಾಚೆಗೆ', ಈ ಮುಂತಾದವು ಹೃದಯಂಗಮವಾಗಿವೆ.

ಕೃಷ್ಣನ ಶೈಶವ, ಎಳೆಯ ಹುಡುಗನಾಗಿದ್ದಾಗ ಅವನು ಕಟ್ಟಿದ ಆಟಗಳು, ಮಾಡಿದ ಚೇಷ್ಟೆಗಳು ಇವು ವೈಷ್ಣವ ಸಾಹಿತ್ಯದಲ್ಲಿ ದಾಸರ ಮೆಚ್ಚಿಕೆಯನ್ನು ಬಲವಾಗಿ ಹಿಡಿದವು. ಈ ಲೀಲೆಗಳಲ್ಲಿ ವಾತ್ಸಲ್ಯಭಾವ ಮಧುರಭಾವ ಎರಡೂ ಕಂಡು ಬರುತ್ತವೆ. ಬಲರಾಮ, ಕೃಷ್ಣ ಇಬ್ಬರನ್ನು ಹೊಗಳಿಕೆಗೂ, ಪುರಸ್ಕಾರಕ್ಕೂ ಆಯ್ದುಕೊಳ್ಳುತ್ತಾರೆ. ಈ ಇಬ್ಬರ ಮೂರ್ತಿಗಳಲ್ಲಿ ಮೇಲ್ಪಟ್ಟು ಪ್ರಭಾವಗೊಳ್ಳುವ ಪುಟ್ಟ ಕೃಷ್ಣನ ತಾಯಿ ಯಶೋದೆಯ ಅದೃಷ್ಟವನ್ನು ಹೊಗಳುವುದೇ ಹೊಗಳುವುದು. ತಾಯಿ ಮಗುವನ್ನು ಎಣಿಸಲಾಗದಷ್ಟು ರೀತಿಯಲ್ಲಿ ಆಡಿಸುತ್ತಾಳೆ. ಮಗುವನ್ನು ಎತ್ತಿ ಕೊಳುತ್ತಾಳೆ – ಲಾಲಿಸುತ್ತಾಳೆ–

ಗೋಪಿಯ ಭಾಗ್ಯವಿದು

ಆ ಪರಮಾತ್ಮನ ಅಪ್ಪಿ ಮುದ್ದಾಡು
ವುದು ||
ನಿತ್ಯ ನಿರ್ಮಲನಿಗೆ ನೀರನೆರೆದು ತಂದು
ಎತ್ತಿ ತೊಡೆಯೊಳಿಟ್ಟು |
ಮುದ್ದಿಸುತ್ತ ಪುತ್ರನೆಂದರಿತು
ತಕ್ಕೈಸುವಳು |
ಸತ್ಯಲೋಕವನಾಳುವ ವಿಧಿಜನಕ
ನೊಡನೆ



ಗುಮ್ಮ ಬಂದಿದೆ ಸುಮ್ಮನಿರು ಎನುತ ಅಮ್ಮಿಯ ನೀಯುತ ಅಮರರನಾಳ್ದನ ರಮ್ಮಿಸಿ ರಮ್ಮಿಸಿ ಮುದ್ದಾಡುವಳು. ಜಗದೋದ್ಧಾರನ, ತನ್ನ ಮಗನೆಂದು ಬಗೆದು ನಿಗಮಗೋಚರನ ಆಡಿಸಿದಳು ಯಶೋದೆ.

ಹಾಲು ಕಡಲು ಮನೆಯಾಗಿ
ಮೂಲೋಕವ
ಪಾಲಿಸುತ್ತಿಪ್ಪ ನಾರಾಯಣನ
ಕಾಲಮೇಲೆ
ಮಲಗಿಸಿ ಬಟ್ಟಲತುಂಬ ಹಾಲುಕುಡಿಸಿ
ಸಂತೈಸುವಳು ||



ಅವನು ನಿತ್ಯತೃಪ್ತನು ಎಂದರಿಯದೆ ಹೊನ್ನಿನ ಹರಿವಾಣದೊಳಗೆ ಮೃಷ್ಟಾನ್ನವನ್ನು ನೊರೆಹಾಲು, ಘೃತ ಸಕ್ಕರೆ ಕೂಡಿಸಿ ಕರೆಕರೆದು ಉಣಿಸಿ ತೃಪ್ತಿಪಡಿಸುವಳು. ಅಂಗಜಪಿತನು ಅವನು. ಮೋಹದಿಂದ ಹೊಸ ಅಂಗಿ ತೊಡಿಸಿ ಟೊಪ್ಪಿಗೆ ಇರಿಸಿ ಬಂಗಾರದ ಅರಳೆಲೆ ಬಿಂದುಲಿಗಳನ್ನಿಟ್ಟು, ಸಿಂಗಾರ ಮಾಡಿ ನೋಡುವುದು. ದೃಷ್ಟಿ ತಾಗೀತು ಎಂದು ಅಂಗಾರವನ್ನಿಟ್ಟು, ತಟ್ಟೆಯಲ್ಲಿ ಆರತಿಗಳ ಬೆಳಗಿ, ತಟ್ಟನೆ ಉಪ್ಪು ಬೇವು ನಿವಾಳಿಸಿ ತೊಟ್ಟಿಲಲ್ಲಿಟ್ಟು ಮುದ್ದಾಡುವಳು. ನಮ್ಮಪ್ಪ ರಂಗಯ್ಯ ಅಳಬೇಡವೂ, ದೊಡ್ಡ

ಅವನು ಅಣೋರಣೀಯನು ಮಹತೋಮಹನೀಯನು. ಸಿಗಮಕ್ಕೆ ನಿಲುಕದ ಅಗಣಿತ ಗುಣನು. ಈ ಮಗುಗಳ ಮಾಣಿಕ್ಯವನ್ನು ತನ್ನ ಮಗನೆಂದು ಒಗೆದಾಡುವಳು. ತಾಯ ಹೃದಯ ಈ ಎಲ್ಲಕ್ಕಿಂತ ಮೇಲಿದೆ ಇತರ ತಾಯಂದಿರು, ಹೆಂಗಸರು ಯಶೋದೆಯ ಬಳಿಗೆ ಬಂದು ಮಗುವನ್ನು ಕಂಡು ಎಷ್ಟು ಚೆನ್ನಾಗಿದ್ದಾನೆಂದು ಹೊಗಳುತ್ತಾರೆ ಎಂಬುದು ಇನ್ನೊಂದು ಚಿತ್ರ–

ಎಂಥ ಪುಣ್ಯವೆ ಗೋಪಿ ನಿನ್ನದು
ಎಂಥ ಭಾಗ್ಯವೆ ।
ಇಂಥಾ ಮಗನ ಕಾಣೆವು
–ಎನ್ನುತ್ತಾರೆ.

ಬಲರಾಮ ಕೃಷ್ಣರು ಅಂಬೆಗಾಲಿಕ್ಕುತ್ತ ಬರುತ್ತಿದ್ದಾರೆ, ಸಿಡಿಲೇ, ಮಿಂಚೇ ಗರ್ಜಿಸದಿರಿ ನೀವು, ಮೇಘರಾಜಾ ಮಳೆಯ ಕರೆಯದಿರು, ಭೂದೇವಿ, ನವರತ್ನಗಳಿಂದ ನೆಲಕಟ್ಟಿಕೊಂಡು ಧಳಿ ಥಳಿಸು, ಎಂದು ಅಂಕೆ ಮಾಡುತ್ತಾರೆ. ಕೃಷ್ಣನ ಬಾಯಲ್ಲಿ ಹಲ್ಲು ಬಂದಿದೆಯಂತೆ ಮಲ್ಲಿಗೆ ಮೊಗ್ಗೆಗಳಂತೆ ಇವೆಯಂತೆ ಎಲ್ಲಿ ಬಾಯಿತೆರೆಯೋ ಎಂದರೆ ಅಲ್ಲಿ ಬ್ರಹ್ಮಾಂಡವನ್ನು ಅವರು ಕಾಣುತ್ತಾರೆ. ಎಷ್ಟು ಬಗೆಯಲ್ಲಿ ಮಗುವನ್ನು ಆತನ ಆಟವನ್ನು ಹೊಗಳಿಯಾರು? ಬೆಳೆದ ಪ್ರತಿಯೊಬ್ಬರೂ ಅವನನ್ನು ತಮ್ಮ ಮನೆಗೆ ಕರೆಯುತ್ತಾರೆ. ತಮಗೆ ಮುತ್ತು ಕೊಡೆಂದು ಇತರ ತಾಯಿಯರು ಕರೆಯುತ್ತಾರೆ. ಶುದ್ಧವಾದ ಕರ್ಪೂರದ ಕಂಡಿಗೆಯ ಬಾಯಲ್ಲಿ ಹಿಮ್ಮಿ ಎದ್ದು ಬಂದು ಮುತ್ತು ತಂದರೆ ತಾವು ಕೃತಾರ್ಥರಾದೆನೆಂದು ಕೊಳ್ಳುತ್ತಾರೆ.

ತಾಯಿಯ ಮತ್ತು ಇತರರ ತೊಡೆಗಳ ಮೇಲೆ ಕೂಡಿಸಿ ಕೊಂಡು ಶಿಶು ಕೃಷ್ಣನನ್ನು ತೋಳಾಡಿಸುವ ಚಿತ್ರ ತುಂಬಾ ಮನೋಹರವಾದ್ದು.

"ತೋಳು ತೋಳು ಕೃಷ್ಣ
ತೋಳನ್ನಾಡೈ ।
ನೀಲ ಮೇಘಶ್ಯಾಮ ಕೃಷ್ಣ
ತೋಳನ್ನಾಡೈ ॥ಪ॥
ಗಲಿಕೆಂದು ಅಂದುಗೆ ಉಲಿವ
ಗೆಜ್ಜೆಯ ತೋಳು ।
ಅಲುಗುವ ಅರಳೆಲೆ ಮಾಗಾಯಿ
ಮಿನುಗಲು ತೋಳು ।
ನಿಲವು ನಿಲುಕದ ದೆಂದೊರಳ
ತಂದಿಡುವನು ತೊಳು ।
ಚೆಲುವ ಮಕ್ಕಳ ಮಾಣಿಕ್ಯವೇ ನೀ
ತೋಳನ್ನಾಡೈ" ॥

ಹೀಗೆ ಕೃಷ್ಣನ ಬಾಲಲೀಲೆಗಳಲ್ಲಿ ಮುಖ್ಯವಾದ ಪ್ರಸಂಗಗಳನ್ನು ಹೇಳುತ್ತ ಆಡಿಸುತ್ತಾರೆ. ಬಹು ಸಣ್ಣವಯಸ್ಸಿನ ಈ ಆಟ ಮಗುವನ್ನು ಸಂತೋಷ ಪಡಿಸುತ್ತದೆ. ವಾತ್ಸಲ್ಯದ ಚಿತ್ರಗಳಲ್ಲಿ ಈ ನಾಡಿನ ಹೆಣ್ಣು ಮಕ್ಕಳಿಗೆ ಹಿಂದಿನ ಕಾಲದಲ್ಲಿ ಇಂಥದು ಒಂದು ದಿನನಿತ್ಯದ ಸಂತೋಷವಾಗಿತ್ತು ಎಂಬ ಚಿತ್ರ ಇಂಥ ಹಾಡುಗಳಲ್ಲಿ ಕಾಣುತ್ತದೆ

ತುಂಟ ಕೃಷ್ಣನನ್ನು ಸುಮ್ಮನಿರಿಸಲಿಕ್ಕೆಂದು ಯಶೋದೆ ಅವನಿಗೆ ಭಯಹಿಡಿಸಲು ದೆವ್ವ, ಭೂತ, ಕಳ್ಳ ಎಂಬ ಏನೇನೋ ಹೆಸರುಗಳನ್ನು ಹೇಳಿ ಕೂಗದೆ ನಿದ್ದೆಮಾಡಲು ಹೇಳುತ್ತಾಳೆ. ಅದಕ್ಕೆ ಮುದ್ದು ಕೃಷ್ಣ ಹೇಳುವ ಉತ್ತರವಿದು–

ಗುಮ್ಮನ ಕರೆಯದಿರೆ ಅಮ್ಮ ನೀನು ।
ಸುಮ್ಮನೆ ಇರುವೆನು ಅಮ್ಮಿಯ
ಬೇಡೆನು ।
ಮಮ್ಮು ಉಣುತೇನೆ ಅಳುವುದಿಲ್ಲ ॥

ಯಾವ ಯಾವ ಚಾಡಿ ಕೃಷ್ಣನ ಮೇಲೆ ಬಂದಿತ್ತೋ ಅವುಗಳನ್ನೆಲ್ಲ ಇನ್ನು ಮುಂದೆ ಮಾಡುವುದಿಲ್ಲ ಎನ್ನುತ್ತಾನೆ. ಹೆಣ್ಣುಗಳಿರುವಲ್ಲಿಗೆ ಹೋಗಿ ಅವರ ಕಣ್ಣ ಮುಚ್ಚುವುದಿಲ್ಲ. ಭಾವಿಗೆ ಹೋಗುವುದಿಲ್ಲ. ಹಾವಿನ ಮೇಲೆ ಆಡುವುದಿಲ್ಲ ಗುಮ್ಮನ. ಕರೆಯದಿರು ಎಂದು ಹೇಳುತ್ತಾನೆ ಮಗನ ಮಾತನ್ನು ಕೇಳಿ ಗೋಪೀದೇವಿ ಮುಗುಳು ನಗೆ ನಗುತ್ತ ಮೋಹದಿಂದ ಬಿಗಿಪಪ್ಪಿ ಕೊಳ್ಳುತ್ತಾಳೆ. ಮತ್ತೊಂದು ಸಲ ಎಲ್ಲಿ ಗುಮ್ಮ ನೆಲ್ಲಿಹ ತೋರಮ್ಮ, ಸುಮ್ಮನೆ ಅಂಜಸಬೇಡಮ್ಮ ಎಂದು ತಿರುಗಿ ಬೀಳುತ್ತಾನೆ.

ಕೃಷ್ಣ ಮನೆಯಿಂದ ತಪ್ಪಿಸಿಕೊಂಡು ಹೋಗಿ ಇತರರ ಮನೆಯ ಹೆಂಗಸರ ಸೆರಗಿನ ಕೊನೆ ಹಿಡಿದು ಆಡುತ್ತಾನೆ, ಕಾಡುತ್ತಾನೆ, ಅವರ ದಿನ ಕೆಲಸಗಳಿಗೆ ಅಡ್ಡಿ ಮಾಡುತ್ತಾನೆ. ಆಗ ತಾಯಿ ಯಶೋದೆ ಹಲವರ ಮನೆಗೆ ಹೋಗಿ 'ನಿಮ್ಮ ಮನೆಗಳಲ್ಲಿ ನಮ್ಮ ಮುದ್ದು ಕೃಷ್ಣನ ಕಂಡಿರೇನಮ್ಮ' ಎಂದು ಕೇಳಿ ಬರುತ್ತಾಳೆ. ನಂತರ ಕೃಷ್ಣ ಮನೆಗೆ ಬಂದು ಮುದ್ದು ಮುದ್ದಾಗಿ ಚಾಡಿ ಹೇಳುವನು–
"ಆಡ ಹೋದಲ್ಲಿ ಮಕ್ಕಳು ಎನ್ನನು । ಆಡಿಕೊಂಬರು ನೋಡಮ್ಮ । ನೋಡಿ ನೋಡಿ ಇತ್ತ ಮುಖವ। ಮಾಡಿ ಕಣ್ಣು ಮಿಟುವರಮ್ಮ । ದೇವಕಿ ಪೆತ್ತಳಂತೆ, ವಸು । ದೇವನೆಂಬವ ಪಿತನಂತೆ । ಕಾವಲಿ ನೊಳು ಪುಟ್ಟಿದೆನಂತೆ । ಮಾವ ಕಂಸಗಂಜಿ ಬಂದೆನಂತೆ ನೋಡಮ್ಮ । ನೀನೆನ್ನ ಪೆತ್ತಿಲ್ಲವಂತೆ ಅಮ್ಮಾ । ನಾನಿನ್ನ ಮಗನಲ್ಲವಂತೆ ।

ಖೇಲನ ಅಬ್ ಮೋರಿಜಾತ ಬಲೈಯಾ
ಜಬಹಿ ಮೋಹಿ ದೇಖತ ಲರಿಕನ ಸಂಗ ತಬ್‌ಹಿ ಖಿಜಾವತ್ ಬಲಭೈಯಾ ॥
ಮೊಸೌ ಕಹತ ತಾತ ವಸುದೇವಕೊ, ದೇವಕಿ ಕೇರಿ ನೈಯಾ
ಮೋಲ ಲಿಯೊಕ ಕುದ್ಯೆಕರಿ ತಿನಕೌ, ಕರಿ ಕರಿ ಜತನ ಬಢ್ಯೆಯಾ ॥
–ಸೂರದಾಸ

ಮುದ್ದು ಬಾಲಕೃಷ್ಣ ತಂದೆ ತಾಯಿಯೊಂದಿಗೆ ಹೇಳುತ್ತಾನೆ-ನಾನು ಆಟವಾಡಲು ಹೋಗುವುದಿಲ್ಲ. ಏಕೆಂದರ ಗೊಲ್ಲ ಬಾಲಕರೊಂದಿಗೆ ಸೇರಿಕೊಂಡು ಬಲರಾಮ ನನ್ನನ್ನ ಪೀಡಿಸುತ್ತಾನೆ, ನಿನ್ನ ತಂದೆ ವಸುದೇವ, ತಾಯಿ ದೇವಕಿ, ಏನೋ ಸ್ವಲ್ಪ ಕೊಟ್ಟು ನಿನ್ನನ್ನು ಕೊಂಡು ಕೊಂಡಿದ್ದಾರೆ. ನಂದ ಮತ್ತು ಯಶೋದೆಯರು ಬಿಳಿ ಬಣ್ಣದವರಾಗಿದ್ದಾರೆ. ನೀನು ಕಪ್ಪುಬಣ್ಣದವ. ನೀನು ಹೇಗೆ ಅವರ ಮಗನಾಗಲು ಸಾಧ್ಯ? ಹೀಗೆ ಅವರೆಲ್ಲರು ಕೂಡಿ ನನ್ನನ್ನು ಛೇಡಿಸಿ ಓಡಿ ಹೋಗುವರು. ತಾಯಿ ಯಶೋದೆ ಮಗನನ್ನು ತಬ್ಬಿಕೊಂಡು ಹೇಳುತ್ತಾಳೆ - ನಮ್ಮ ಗೋವುಗಳ ಸಾಕ್ಷಿಯಾಗಿ ನೀನು ನಮ್ಮ ಮಗನೇ......... !

ಧೇನು ಕಾಯುವರಿಲ್ಲವೆಂದು । ನೀನು ಸಾನುರಾಗದಿ ಸಲಹಿದೆಯಂತೆ ನೋಡಮ್ಮ। ಎನ್ನುತ್ತಾನೆ.

ಬಾಲಕೃಷ್ಣ ಯಾರ ಅಂಕೆಗೂ ಒಳಪಡದೆ ಗೋಪಿಯರ ಮನೆಗೆ ಹೋಗಿ ಬೆಣ್ಣೆ ಕದಿಯುತ್ತಾನೆ. ಅವರೊಡನೆ ಆಟವಾಡುತ್ತಾನೆ. ಅವರ ಬೆದರಿಕೆಗಳಿಗೆ ಇವನು ಹೆದರುವುದಿಲ್ಲ. ಒಳಮನೆ, ದೇವಾಗಾರದಲ್ಲಿ ಊಟ ಮಾಡುತ್ತಾನೆ. ಅವರು ದೇವರುಗಳಿಗಾಗಿ ಇಟ್ಟ ನೈವೇದ್ಯವನ್ನೆಲ್ಲ ತಾನು ತಿನ್ನುತ್ತಾನೆ. ಇದು ದೇವರ ನೈವೇದ್ಯವೆಂದು ಎಚ್ಚರಿಕೆ ಕೊಟ್ಟರೆ, ತಾನು ತಿಂದರೆ ಸಾಕು ಅವರ ದೇವರು ತೃಪ್ತನಾದಾನು ಎನ್ನುತ್ತಾನೆ. ಹೂಗಳನ್ನು ತಂದು ಹೆಣ್ಣುಗಳಿಗೆಲ್ಲ ಮುಡಿಸಿ ಅಲಂಕಾರ ಮಾಡಲು ಹೋಗುತ್ತಾನೆ. ಅವರಿಗೆ ಅನೇಕ ಬಗೆಯ ಅಲಂಕಾರಗಳನ್ನು ಮಾಡಿ ಬೇರೆ ಹುಡುಗರಿಗೆ ಸಲ್ಲದ ಸವರಗಳನ್ನು ವಹಿಸುತ್ತಾನೆ. ಎಂದು ಗೋಪಿಕಾ ಸ್ತ್ರೀಯರು ಹೇಳುತ್ತಾರೆ. "ಊರೊಳಗೆ ಇರಲೀಸ, ಊರ ಬಿಟ್ಟು ಹೋಗಲೀಸ, ಈರೇಳು ಭುವನಕ್ಕೆ ಒಡೆಯನೆಂದು ಕೊಳ್ಳುತ್ತಾನೆ. ನಿನ್ನ ಮಗನ ಲೂಟಿ ಘನ, ಕರೆದು ಚೆನ್ನಾಗೆ ಬುದ್ಧಿಯ ಹೇಳೆ ಗೋಪಮ್ಮ, ಕೇರಿಯ ಬಸವನ ಮಾಡಿ ಬಿಟ್ಟ ಅವನ" ಎಂದು ಅವನ ಮೇಲೆ ಕೂಗು. ಅವನು ಮಾರ್ಯಾದೆಯಿಂದ ನಡೆದು ಕೊಳ್ಳುವಂತೆ ತಾಯಿ ಅವನಿಗೆ ಬುದ್ಧಿ ಕಲಿಸಬೇಡವೆ? ಈ ಹುಡುಗ ನಿನ್ನ ಮಗ ಬೇರೆಯ ಮನೆಯ ನಮ್ಮಂತಹ ಹುಡುಗಿಯರೊಡನೆ ಸಲ್ಲದ ರೀತಿಯಲ್ಲಿ ನಡೆದು ಕೊಳ್ಳಲು ಇವನಿಗೆ ಎಲ್ಲ ಸ್ವಾತಂತ್ರ್ಯವೂ ಬಂದು ಬಿಟ್ಟಿದೆ. ನಿನಗೆ ಮಗನಾದರೆ ಅದನ್ನು ಕಟ್ಟಿಕೊಂಡು ಇತರರಿಗೇನು? ಒಬ್ಬಳೆನ್ನುತ್ತಾಳೆ 'ವಯಸ್ಸಿನಲ್ಲಿ ಇವನು ನನ್ನ ಓರಗೆಯೆ? ಕಣ್ಣುಸನ್ನೆ ಮಾಡುತ್ತಾನೆ. ಬಗೆ ಬಗೆ ಹಣ್ಣು ಕೈಯಲ್ಲಿ ತೋರುತ್ತಾನೆ. ಎನ್ನ ಚೆಲುವಿಕೆ ಬಣ್ಣಿಸುತ್ತ ತಿರುಗುತ್ತಾನೆ. ಇವನೇನೆ! ಇನ್ನೂರ ವರಹ ಕೊಟ್ಟು ಎನ್ನ ಮದುವೆಯಾದನೇ ?' ಈ ಮಗು ಅತಿಮಾನವನಂತೆ ಕಾಣುತ್ತಿದ್ದರೂ ಇಂಥವನಿಗೆ ಸಲ್ಲದು, ಇನ್ನು ಈ ಗೋಕುಲದಲ್ಲಿರಲಾರೆವು ಗೋಪಮ್ಮ-ಎಂದೂ ನಿನ್ನ ಮಗನಿಗಾಗಿ ಕೇರಿಯ ಬಿಟ್ಟು



## ಕೊಬ್ಬರಿಗಿಟುಕಿನ ಕೆತ್ತನೆ

ಒಣಕೊಬ್ಬರಿಯ ಗಿಟುಕಿನ ಮೇಲೆ ಚಿತ್ತಾರದ ಕುಸುರಿಗೆಲಸ ಹಿಂದೂಗಳಿಗೆ ಹೊಸದೇನಲ್ಲ. ಆದರೆ ಅಲ್ಲಿಯೂ ಸಾಂಪ್ರದಾಯಕ ಮಾರ್ಗವನ್ನು ಬಿಟ್ಟು ತಮ್ಮ ತಮ್ಮ ಆರಾಧ್ಯದೈವಗಳ ವಿವಿಧ ಭಾವಗಳ ಚಿತ್ರಣ ಅಪರೂಪವೇ ಸರಿ. ಅಂತಹ ಕಲೆಗಾರರಲ್ಲಿ ಕೆ. ಜಿ. ಎಫ್‌ನ ಕೆ. ರಾಘವೇಂದ್ರರಾಯರು ಒಬ್ಬರು. ಅವರ ಕುಸುರಿಗೆಲಸದ ಹಲವು ನಮೂನೆಗಳನ್ನು ಈ ಚಿತ್ರಗಳಲ್ಲಿ ಕಾಣಬಹುದು.

ಚಿತ್ರಗಳು –ಕೆ. ರಾಘವೇಂದ್ರರಾವ್



ಪೋಪೆವೋ ಬೆಳಗಾಗ ಯಾಶೋದೆಗೆ ಏನು ಮಾಡಬೇಕೆಂಬುದು ತಿಳಿಯದಾಗುತ್ತದೆ. ಅಂಥ ಸಂದರ್ಭಗಳಲ್ಲಿ ಆಕೆಗೆ ತೋರುವು ದೊಂದೇ. ಅವರೆಲ್ಲರಿಗೂ ಅವಳು ಹೇಳುವು ದೊಂದೇ. 'ನೀವು ಹೇಳುವ ಚಾಡಿ ಎಲ್ಲವೂ ಸುಳ್ಳು. ನನ್ನ ಮಗನು ಏನೂ ಅರಿಯದ ಮುದ್ದು ಕಂದ. ತುಂಬ ಸಾಧು ಸಜ್ಜನ. ತನ್ನ ಬೆರಳನ್ನು ಬಾಯೊಳಗಿಟ್ಟರೆ, ಬೆಟ್ಟನ್ನು ಕಚ್ಚಲರಿಯ. ಕಟ್ಟಿರುವೆಯನ್ನು ಕಂಡರೆ ಭಯವೆಂದು ಚಿಟ್ಟನೆ ಚೀರುತ್ತಾನೆ. ಸಿಕ್ಕಿದ ಮಾತುಗಳಾಡಿ ಅವನನ್ನು ಬೀದಿಗೆ ಎಳೆಯ ಬೇಡಿ' ಎಂದು ಹೇಳುವಳು. ಆದರೂ ಅವಳಿಗೆ ಗೊತ್ತು. ಇವನು ತುಂಟ-ಸಾಮಾನ್ಯನಲ್ಲ ಎಂದು. 'ಸಾಕು ಮಾಡಿರವ್ವ ರಂಗನ ಏಕೆ ದೂರುವಿರಿ' ಎಂದು ಹೇಳಿ ಅವರನ್ನು ಕಳುಹಿಸಿ ಮಗುವನ್ನು ಕರೆದು, 'ದೂರು ಮಾಡುವರೊ ರಂಗಯ್ಯ ನಿನ್ನ' ಎಂದು ಮಗನಿಗೆ ಹೇಳಿ ನಂತರ ಮಗನೊಂದಿಗೆ ಬಿನ್ನೈಸಿ ಕೊಳ್ಳುವಳು.

"ಏನು ಮಾಡಲಿ ಮಗನೆ ಏಕೆ
ಬೆಳಗಾಯಿತು |
ಮಾನಿನಿಯರು ಬಂದು ಮಾನವ
ಕಳೆಯುವರು |
ಹಾಲು ಮೊಸರು ಬೆಣ್ಣೆ
ಕದ್ದನೆಂಬುವರು |
ಮೇಲಿಟ್ಟ ಕೆನೆಯನ್ನು ಮೆದ್ದ
ನೆಂಬುವರು |
ಬಾಲರೆಲ್ಲರ ಬಡಿದನೆಂಬುವರು ಎಂಥ
ಕಾಡು ಹೆಂಗಸು ಇವನ
ಹಡೆದಳೆಂಬುವರು |
ಕಟ್ಟಿದ್ದ ಕರುಗಳ ಬಿಟ್ಟನೆಂಬುವರು |
ಎಂಬ ಹಾಗೆಯೆ ಗಂಗಾ ಜನಕ ನಿನ್ನ
ಜಾರನೆಂಬುವರು |
ನಿನ್ನ ಬರಿದೆ ದೂರುವರು | ಹಿಂಗದೆ
ಎಮ್ಮನು ಸಲಹೆಂದೆಂಬುವರು ||"

ಹೀಗೆ ಕೃಷ್ಣ ಗೋಪಿಕಾಸ್ತ್ರೀಯರಿಗೆ ಎಷ್ಟೋ ರೀತಿಯಲ್ಲಿ ಪೀಡಿಸಿ, ಕಾಡಿಸಿದ್ದರೂ ಅವನನ್ನು ಮಥುರೆಗೆ ಕರೆದೊಯ್ಯಲು ಉದ್ಧವ ಬಂದಾಗ ಅವರೆಲ್ಲರಿಗೂ ಆದ ದುಃಖ ಕೊನೆಯಿಲ್ಲದ್ದು. ಅವನಿಲ್ಲದ ಬದುಕು, ಮನದ ಹೊಯ್ದಾಟ- ಅವನು ಹೊರಟು ಹೋದ ಮೇಲೆ ವ್ರಜದಲ್ಲಿ ಸಂತೋಷ ಎಂಬುದೇನು ಳಿದಿದೆ! ಅವನ ಅಗಲಿಕೆಯನ್ನು ವರ್ಣಿಸುವ ಹಾಡುಗಳು ಅವರ ಕೋಮಲ ಅಂತಃಕರಣವನ್ನೂ ದೀನತೆಯನ್ನು ಸೂಚಿಸುತ್ತವೆ ಬೃಂದಾವನ, ಗೋಕುಲದಲ್ಲಿ ಬದುಕು... ಇನ್ನು ಮೇಲೆ ನೀರಸ. ಗೋಪಿಕಾಸ್ತ್ರೀಯರು ಉದ್ಧವನನ್ನು ಬೇಡಿಕೊಳುತ್ತಾರೆ- ಸಂಪೂರ್ಣ ಜ್ಞಾನ ಕೊಡು, ನಮಗೆ ಭಕ್ತಿ ಕೊಡು ನಮಗೆ ಸದ್ಗತಿಕೊಡು ಎಂದು. ಇವನ ಆಟಗಾರಿಕೆ, ಚೇಷ್ಟೆ, ಪುಂಡಾಟ, ಕಪಟ, ಶೃಂಗಾರ, ಸಾಹಸ, ಎಲ್ಲವೂ ಅವರು ಅಕ್ಕರೆಯಿಂದ ಪೋಷಿಸಿಕೊಂಡು ಬಂದದ್ದೇ. ಬಾಲಕೃಷ್ಣ ಅವರ ಮನಸ್ಸನ್ನು ಅಂತಃಕರಣವನ್ನು ತುಂಬಿದ್ದಾನೆ. ಅವನ ಕಾರಣದಿಂದ ಉಂಟಾಗುತ್ತಿದ್ದ ಸಣ್ಣ ಕಿರುಕುಳವನ್ನು ಸಿಡುಕು ಮಿಡುಕುಗಳನ್ನು ಅವರು ನೆನೆಯದಾದರು. ಅವನಿಂದ ಅವರಿಗೆ ಉಂಟಾದ ಸಂತೋಷ, ನೆಮ್ಮದಿ ಮತ್ತು ಕಷ್ಟದಿಂದ ಬಿಡುಗಡೆ ಈ ಮೂಲಕ ಅವರ ಜೀವನದ ಕೋಟಲೆಗಳೆಲ್ಲ ತುಂಬಿ ಕೊಳ್ಳುತ್ತಿದ್ದವು. ಆ ಊರಲ್ಲಿ ಅವನು ಇದ್ದು, ಅವರ ಬಾಳಿಗೆಲ್ಲ ವಿಲಾಸ ತಂದು ಕೊಟ್ಟದ್ದಕ್ಕಾಗಿ ಅವರು ಕೃತಜ್ಞರು.

ಅದೇನೆ ಇರಲಿ ಪುರಂದರದಾಸರ ಕೃಷ್ಣ ಲೀಲೆ ಪದಗಳು ಅತ್ಯಂತ ಅಮೋಘವಾಗಿ ಜನ ಮನರಂಜನೀಯವಾಗಿ ಇಂದಿಗೂ ಬೆಳಗುತ್ತಿವೆ. ಇವರು ತಮ್ಮ ದೇವರ ಎದುರಿಗೆ ಹಾಡಿ ಕುಣಿದರು. ದಿನಾ ಹಾಡುತ್ತ, ಕುಣಿಯುತ್ತ ರಾಜ ಬೀದಿಗಳಲ್ಲಿ ಸಂಚಾರ ಮಾಡಿದರು. ಹೀಗೆ ಮಾಡಿದಲ್ಲೆಲ್ಲ, ತಾವು ಹೋದಲ್ಲೆಲ್ಲ ಜನಕ್ಕೆ ದೇವರನ್ನು ಕುರಿತು, ದೇವರ ಕೃಪೆಯನ್ನುಗಳಿಸುವ ಮಾರ್ಗವನ್ನು ಕುರಿತು ನುಡಿಯುತ್ತ ಹೋದರು. ದಾಸ ಕೂಟವೆಂದು ಯಾವುದನ್ನು ಕರೆಯುವರೋ ಜೀವನದ ಆ ಮಾರ್ಗವನ್ನು ಕಟ್ಟನಿಲ್ಲಿಸಿದರು.

ಒಟ್ಟಿನಲ್ಲಿ ಪುರಂದರದಾಸರು ಕೃಷ್ಣಲೀಲೆಯ ಪದಗಳ ಕಥನ, ನಾಟ್ಯ ನಿರೂಪಣ ಮತ್ತು ಸಾಂಕೇತಿಕಧ್ವನಿ ನಾದಮಯವಾಗಿ ತೋರಿಬರುತ್ತದೆ. "ಕೀರ್ತನ ಪದ್ಧತಿಯ ಉದ್ಧಾರ, ಮತ ವೈರಗಳ ಪರಿಹಾರ,

..............................

ಕರ್ಣಾಟಕ ಭಾಷೋಜ್ಜೀವನ, ಸಂಗೀತ ಶಾಸ್ತ್ರದ ಉದ್ಧಾರ" ಇವನ್ನು ಪುರಂದರ ದಾಸರು ಮಾಡಿದರೆಂದು 'ಬೇಲೂರು ಕೇಶವದಾಸರು' ಹೇಳಿದ್ದಾರೆ. ಸಂಗೀತ ಶಾಸ್ತ್ರಕ್ಕೆ ಪುರಂದರದಾಸರು ಮಾಡಿದ ಉಪಕಾರವನ್ನು ಶಾಸ್ತ್ರಜ್ಞರು ಕೊಂಡಾಡಿದ್ದಾರೆ. ತ್ಯಾಗರಾಜರಿಗೆ ಅವರು ಕೊಟ್ಟ ಸ್ಫೂರ್ತಿ ತಿಳಿದ ವಿಷಯವಾಗಿದೆ. ಮುಖ್ಯವಾಗಿ ಪುರಂದರದಾಸರು ಹೇರಳವಾಗಿ ಭಕ್ತಿಗೀತೆಗಳನ್ನು ರಚಿಸಿ ಜನಸಾಮಾನ್ಯಕ್ಕೂ ಕನ್ನಡ ಸಾಹಿತ್ಯಕ್ಕೂ ಚಿರವಾದ ಬೆಸುಗೆಯನ್ನುಂಟು ಮಾಡಿದ ಹಿರಿಯ ವ್ಯಕ್ತಿಗಳಲ್ಲಿ ಒಬ್ಬರಾದರು. *

# ಸಪ್ತಗಿರಿವಾಸ

( ಇದನ್ನು ರಾಗಮಾಲಿಕೆಯಲ್ಲಿ ಹಾಡಬಹುದು )



ಸಪ್ತಗಿರಿವಾಸ ಸದಾನಂದ ಶ್ರೀಶ
ಸಪ್ತಲೋಕಾಧೀಶ ಶ್ರೀ ವೆಂಕಟೇಶ ‖ ಪ ‖

ಮಾನಿತನು ಭೃಗು ಅಜ್ಞಾನದಿ ಸರ್ವೋತ್ತಮ ನಿನ್ನ ದೂಷಿಸೆ
ವಿನಯವ ತೋರಿ ಕಪಟದಿ ಕಣ್ಣೊತ್ತಿ ಸುಜ್ಞಾನವ ನೀಡಿದೆ
ಅನಂತಜ್ಞಾನಿ ಅನಿರುದ್ಧ ಮೂರುತಿ ಶೇಷಾಚಲವಾಸ ‖ ೧ ‖

ಭೃಗು ಮುನಿಯ ಮಾತಿಗೆ ಜಲಜನಯನೆ ಕ್ರೋಧದಿ
ಜಗನ್ನಿಯಾಮಕ ನಿನ್ನ ತೊರೆಯೆ ವಿರಹವ ಸಹಿಸದೆ
ಆಗಲೆ ವೈಕುಂಠವ ತ್ಯಜಿಸಿ ಹುತ್ತದಿ ಆಶ್ರಯ ಪಡೆದೆ
ಅಗಣಿತಮಹಿಮ ವೈನತೇಯವಾಹನ ಗರುಡಾಚಲವಾಸ ‖ ೨ ‖

ಗೋವಿನ ರೂಪದಿ ಬ್ರಹ್ಮ ತಾ ಹಾಲುಣಿಸೆ ಕರುವಾಗಿ ರುದ್ರ
ಹಿಂಬಾಲಿಸೆ
ಸೇವಕ ಗೈದ ಅನುಚಿತ ಕಾರ್ಯಕೆ ಚೋಳನ ಶಪಿಸಿ ವಿಶಾಪ
ನೀಡಿ
ಭುವನನೀತಿಯ ತೋರಿದೆ ಲಕ್ಷ್ಮೀಶ ವೃಷಭಾಚಲವಾಸ ‖ ೩ ‖

ಮಮತೆಯಾ ಸೋನೆಯ ಹರಿಸಿದ ಬಕುಳೆಗೆ
ಅಮಿತ ವಾತ್ಸಲ್ಯದ ಅಮೃತವ ನುಣಿಸಿದ
ಕಮಲಾಕ್ಷ ವೆಂಕಟ ವೇದಾಚಲವಾಸ ‖ ೪ ‖

ವೇದವತಿ ತಾ ಪದ್ಮಾವತಿಯಾಗಿ ಜನಿಸಲು ಕೊರವಂಜಿ ವೇಷದಿ
ಸಾಧಿಸಿ ಕಾರ್ಯವ ಆದಿಲಿ ನೀಡಿದ ಭಾಷೆಯ ಉಳಿಸಿದೆ
ಸುಧಾಮ ಸಖ ರುಕ್ಮಿಣೀವಲ್ಲಭ ಅಂಜನಾಚಲವಾಸ ‖ ೫ ‖

ತೊಂಡಮಾನ ತಾ ಭವ್ಯಮಂದಿರವ ನಿರ್ಮಿಸಿ
ಪಾಂಡುರಂಗ ನಿನಗೇ ಅರ್ಪಿಸೆ
ಪುಂಡರೀಕವರದ ಈ ತಿರುಮಲಕ್ಷೇತ್ರದಿ ನೆಲಸಿದೆಯೋ
ಅಂಡಜಾಧಿಪ ಅಕಳಂಕ ಚರಿತ ಅರುಣಾಚಲವಾಸ ‖ ೬ ‖

ಆರ್ಜವ ಜನಗಳಾ ಹರಕೆಯ ಕೈಗೊಳ್ಳುತಾ ನವರತ್ನ
ಮಕುಟದಿ ವಿರಾಜಿಸುತಾ
ವಜ್ರಕಟಿ ಹಸ್ತದೊಡಗೂಡಿ ಭಕ್ತರಿಗಭಯ ನೀಡಿ ಪದತಲದಲಿ
ವಿರಜೆಯನೊಡನಾಡಿ
ವಿಜೃಂಭಿಸುತಿಹ ಪಾರ್ಥಸಾರಥಿ ಪಾಲ್ಗಡಲೊಡೆಯ
ವೆಂಕಟಾಚಲವಾಸ ‖ ೭ ‖


ಶ್ರೀಮತಿ ರಾಜಲಕ್ಷ್ಮೀ ಪಾರ್ಥಸಾರಥಿ
ಎಂ.ಎಸ್‌ಸಿ;

# ಶ್ರೀ ರಾಘವೇಂದ್ರ ಗುರು ಕರಾವಲಂಬನ



ಸಿರಿಯರಸ ನುತ ಸರಸ ಚಾರು ಚರಣಾಂಬುಜವ
ಪರಿಪರಿ ಪೂಜಿಸುತೆ ಉರದಿ ಧರಿಸಿ ;
ಪರಮ ಭಕುತರ ಪಾಪ ಪರಿಹಾರವಂ ಮಾಳ್ಪ
ಕರುಣಾಳು ಗುರುರಾಜ ಪೊರೆ ಎನ್ನನು. (೧)

ಭಕ್ತರಾಭೀಷ್ಟಗಳ ಬಿಡದೆ ಸಲಿಸುವನೆಂಬ
ವಾರ್ತೆ ಕೇಳುತ ಬಂದೆ ನಿಮ್ಮ ಅಡಿಗೆ,
ವ್ಯಕ್ತ ರೂಪದಿ ಬಂದು ಸೂಕ್ತ ದಾರಿಯನರುಹಿ
ಮುಕ್ತಿ ಮಾರ್ಗವ ತೋರಿ ಪೊರೆ ಎನ್ನನು. (೨)

ಬಂದ ಭವ ಬಂಧದಲಿ ಬೆಂದುನೊಂದಿಹೆನಯ್ಯ
ಮಂದರೋದ್ಧರ ಸ್ವಾಮಿ ರಾಘವೇಂದ್ರ,
ವೃಂದ ವಂದಿತ ಬಂಧು ಬಂಧನವ ಪರಿಹರಿಸಿ
ಚಂದದಿಂ ಗುರುರಾಜ ಪೊರೆ ಎನ್ನನು. (೩)

ಭವರೋಗಿ ನಾನಹುದು ಘನವೈದ್ಯ ನೀನಯ್ಯ
ಸೇವಿಪರ ಕಾವ ದಿವಿಯೋಗಿ ರಾಜ ;
ಸೇವಿಸಲು ಅರಿಯೆ ನಾ ಆವ ವಿಧದಲು ನಿನ್ನ
ಭವದಳಲ ಕಳೆಯುತಲಿ ಪೊರೆ ಎನ್ನನು. (೪)

ನೇಮ ನಿತ್ಯಗಳರಿಯೆ ಮೌನ ಮಾರ್ಗಗಳರಿಯೆ
ಸ್ವಾಮಿ ನಿನ್ನನು ಭಜಿಪ ಭಕುತಿಯರಿಯೆ :
ಕಾಮಿತಾರ್ಥಗಳೀವ ಕಲಿಯುಗದ ಕಲ್ಪತರು
ದೇವ, ನಿತ್ಯಗಳರುಹಿ ಪೊರೆ ಎನ್ನನು. (೫)

ಆಸೆಗಳು ನೂರಾರು ಘಾಸಿಗೊಳಿಸಿಹವೆನ್ನ
ಮೋಸದಲಿ ಮತಿಗೆಟ್ಟು ಬಳಲುತಿರುವೆ ;
ಸೂಸುತಿರುವೀ ದುಃಖ ಶರದಿಯಿಂ ತಾರಿಸಿ
ವಾಸುದೇವನ ದಾಸ ಪೊರೆ ಎನ್ನನು. (೬)

ಸುಧೀಂದ್ರ ಸುಕುಮಾರ ಮೋದದಿಂದಲಿ ತುತಿಸಿ
ವಾದಿಗಜ ಮದ ಧ್ವಂಸನೆಂದು ಭಜಿಪೆ ;
ಮದಿಸಿರುವ ಎನ್ನಹಂಭಾವವನು ಕೊನೆಗೊಳಿಸಿ
ಸಾಧುವಂದಿತ ಮುದದಿ ಪೊರೆ ಎನ್ನನು. (೭)

ಜ್ಞಾನ ಧ್ಯಾನ ಗಾನ ತೃಷೆಯು ತುಂಬಿವೆ ಮನದಿ
ಸಾನುರಾಗಾದಿ ಪೇಳ್ವ ಸ್ವಾಮಿ ಇಲ್ಲ ;
ನೇಮದಿಂದಲಿ ನುತಿಸಿ ಬೇಡಿಕೊಂಬುವೆ ನಿನ್ನ
ಜ್ಞಾನ ಭಕುತಿಯನಿತ್ತು ಪೊರೆ ಎನ್ನನು. (೮)

ಆ ಮೋಹ ಈ ಮೋಹ ಸಂದೋಹದಲಿ ಸಿಲುಕಿ
ಕಾಮಿಯಾಗಿದೆ ಮನವು ಕೇಳ್ವಲ್ಲ ;
ಸ್ವಾಮಿ ಶ್ರೀ ಗುರುರಾಜ ಮೋಹ ಪಾಶವ ಹರಿದು
ಕ್ಷೇಮದಿಂದಲಿ ಸಾಕಿ ಪೊರೆ ಎನ್ನನು. (೯)

ಸ್ವಾರ್ಥ ವಂಚನೆಗಳಲಿ ಸಿಲುಕಿ ಕಲಕಿದೆ ಹೃದಯ
ವ್ಯರ್ಥವಾಗಿದೆ ಎನ್ನ ವ್ಯಸನಬಾಳು,
ಸಾರ್ಥಕತೆ ದಾರಿಯನು ಶ್ರೀ ಕೃಷ್ಣನರುಹಿದೊಲು
ಪಾರ್ಥನಿಗೆ, ನೀನರುಹಿ ಪೊರೆ ಎನ್ನನು (೧೦)

ಮಂಗಳಾಂಗನೆ ನಿನ್ನ ಸಂಗವಾಗಲಿ ಸತತ
ಸಂಗೀತ ಸಾಹಿತ್ಯ ಧ್ಯಾನ ಮೌನದಲಿ ;
ವ್ಯಂಗ್ಯವಾಗಿಹ ಎನ್ನ ಹೀನ ಗತಿಯಂ ಕಳೆದು
ರಂಗ ನರಹರಿ ನೀಡು ಶುಭ ಮಂಗಳ (೧೧)

ಗುರುರಾಜ ಬೆಣಕಲ್

(16 ನೇ ಪುಟದಿಂದ)

ಅವನ ಗುರುವಾದ ವಿಮಲಾಕ್ಷ ಪುಣತ್ರಾತ, ಬುದ್ಧಯಶಸ್, ಧರ್ಮಯಶಸ್ ಮೊದಲಾದ ವಿದ್ವಾಂಸರು ದಶಾಧ್ಯಾಯ ವಿನಯ, ಸರ್ವಾಸ್ತಿವಾದ ವಿನಯ, ಆಕಾಶಗರ್ಭಬೋಧಿಸತ್ವಸೂತ್ರ, ಸ್ತ್ರೀವಿವರ್ತ ವ್ಯಾಕರಣಸೂತ್ರ, ಸಾರೀಪುತ್ರಾಭಿಧಾನಸೂತ್ರ, ಬೋಧಿಸತ್ವಪ್ರತಿಮೋಕ್ಷಸೂತ್ರ, ಧರಣೀಸೂತ್ರ ಇತ್ಯಾದಿ ಮೂಲ ಮತ್ತು ಅನೂದಿತಗ್ರಂಥಗಳು ಚೀನೀಯರ ಮೇಲೆ ಬಹಳ ಪ್ರಭಾವ ಬೀರಿದವು.

ಕ್ರಿ. ಶ. ಐದನೆಯ ಶತಮಾನಕ್ಕೆ 'ಗುಣವರ್ಮನ ಯುಗ'ವೆಂದು ಕರೆಯುತ್ತಾರೆ. ಕಾಶ್ಮೀರದ ರಾಜಪುತ್ರ ಗುಣವರ್ಮ ಮತ್ತು ಬುದ್ಧಜೀವರು ಸಿಂಹಳ ಮತ್ತು ಜಾವಾ ಮೊದಲಾದ ದ್ವೀಪಾಂತರಗಳ ರಾಜರನ್ನೂ ಜನಗಳನ್ನೂ ಬೌದ್ಧರನ್ನಾಗಿಮಾಡಿ ಚೀನಾದ ನ್ಯಾನ್‌ಕಿಂಗಿನ ಜೇತವನಕ್ಕೆ ಬಂದಾಗ ಚೀನೀ ಚಕ್ರವರ್ತಿಯು ಅವರನ್ನು ಸ್ವಾಗತಿಸಿದನು. ಗುಣವರ್ಮನ 78 ಮಹಾಯಾನ ಗ್ರಂಥಗಳೂ ಆತನ ಪ್ರೇರಣೆಯಿಂದ ದಕ್ಷಿಣಭಾರತೀಯ ಧರ್ಮರುಚಿ ಮತ್ತು ಧರ್ಮರಾಜಯಶಸ್, ಗುಣತ್ರಾಹಿ ರತ್ನಮತಿ, ಬೋಧಿರುಚಿ, ಗೌತಮ ಪ್ರಜ್ಞಾರುಚಿ, ಬುದ್ಧಶಾಂತ, ಅಶೋಕದತ್ತ, ರಾಜಪುತ್ರ ಉಪಶೂನ್ಯ ವಿಮಲಕೀರ್ತಿ. ವಿಮೋಕ್ಷ ಪ್ರಜ್ಞ ಮುಂತಾದ ಭಾರತೀಯ ವಿದ್ವಾಂಸರಿಂದ ಭಾಷಾಂತರಗೊಂಡ ನೂರಾರು ಗ್ರಂಥಗಳು ಈ ಹೆಸರು ಬರಲು ಕಾರಣವಾಗಿದೆ. ಇದೇ ಕಾಲದಲ್ಲಿ ಚೀನೀ ಬೌದ್ಧಸನ್ಯಾಸಿನಿಯರ ಸಂಘವು ನ್ಯಾನ್‌ಕಿಂಗ್‌ನಲ್ಲಿ ಸ್ಥಾಪಿಸಲ್ಪಟ್ಟಿತು.

ಕ್ರಿ. ಶ. ಆರನೆಯ ಶತಮಾನಕ್ಕೆ ಚೀನೀ ರಾಜಪರಿವಾರಗಳ ಗುರುವಾಗಿದ್ದ 'ಜಿನಗುಪ್ತನ ಯುಗ'ವೆಂದು ಹೆಸರಾಗಿದೆ. ಈತನು ಭಾರತೀಯ ಗ್ರಂಥಗಳನ್ನು ತಪ್ಪಿಲ್ಲದೇ ಭಾಷಾಂತರಮಾಡಲೂ ಅವುಗಳನ್ನು ಪರೀಕ್ಷಿಸಲೂ ಏರ್ಪಡಿಸಲು, ನರೇಂದ್ರ ಯಶಸ್ಸಿನ ಎಂಟು ಪ್ರಸಿದ್ಧಗ್ರಂಥಗಳೂ ಪರಮಾರ್ಥನ ಮಹಾಯಾನ ಶ್ರದ್ಧೋತ್ಪಾದ ಶಾಸ್ತ್ರ, ತರ್ಕಶಾಸ್ತ್ರ, ವಸುಬಂಧುಚರಿತ್ರೆ ಮೊದಲಾದ ಹಲವಾರು ಉತ್ಕೃಷ್ಟವಾದ ಚೀನೀ ಭಾಷೆಯ ಅನೂದಿತ ಗ್ರಂಥಗಳು ರಚಿಸಲ್ಪಟ್ಟವು.

ಕ್ರಿಸ್ತಶಕ ಏಳನೆಯ ಶತಮಾನದಲ್ಲಿ ಯುಆನ್-ಚ್ವಾಂಗ್ ಮತ್ತು ಇತ್ಸಿಂಗ್ ಎಂಬ ಚೀನೀ ಯಾತ್ರಿಕರು ಭಾರತದಲ್ಲೆಲ್ಲಾ ಸಂಚರಿಸಿ ನಳಂದಾ ಮುಂತಾದ ವಿಶ್ವವಿದ್ಯಾಲಯಗಳಲ್ಲಿ ಅಧ್ಯಯನ ಮಾಡಿ ನೂರಾರು ಭಾರತದ ಅಮೂಲ್ಯಗ್ರಂಥಗಳನ್ನು ಚೀನಾಗೆ ತೆಗೆದುಕೊಂಡುಹೋದ ವಿಷಯ ಎಲ್ಲರಿಗೂ ತಿಳಿದಿದೆ. ಯುಆನ್‌ಚ್ವಾಂಗನ ಮಹಾಪ್ರಜ್ಞಾಪಾರಮಿತಸೂತ್ರ, ವಜ್ರಛೇದಕ ಪ್ರಜ್ಞಾಪಾರಮಿತ, ಅತಿಗುಪ್ತನ ಧರಣೀಸಂಗ್ರಹ ಸೂತ್ರ, ಸತ್ವ ಪರಿಪೃಚ್ಛ, ದಿವಾಕರನ ಲಲಿತ ವಿಸ್ತಾರ ಮತ್ತು ಮಂಜುಶ್ರೀ ಪರಿಪೃಚ್ಛ, ರತ್ನಚಿತ್ತನ ಏಕಾಕ್ಷರಧಾರಿಣಿ ಮೊದಲಾದ ಗ್ರಂಥಗಳು ಪ್ರಸಿದ್ಧವಾಗಿವೆ. ಈ ಕಾಲದಲ್ಲಿ ಮೇಲೆ ತಿಳಿಸಿದಂತೆ ಮಹಮ್ಮದೀಯ ಆಕ್ರಮಣದಿಂದ ಮಧ್ಯಏಷ್ಯಾದ ಮೂಲಕ ಭಾರತ ಚೀನೀ ಸಂಚಾರ ನಿಂತಿತು. ಇದೇ ಕಾಲದಲ್ಲಿ ಟಿಬೆಟ್ಟಿನ ರಾಜ ಸ್ರಾಂಗ್‌ತ್ಸಾನ್ಸ್ ಗಂಪೋ ಚೀನಾ ಹಾಗೂ ನೇಪಾಳದ ರಾಜಪುತ್ರಿಯರೊಡನೆ ವಿವಾಹ ಸಂಬಂಧ ಬೆಳೆಸಿದನು. ಆತನ ರಾಣಿಯರಿಂದಾಗಿ ಬೌದ್ಧ ಸಂಪ್ರದಾಯವನ್ನು ಭಾರತೀಯ ವಿದ್ವಾಂಸರಿಂದ ಪ್ರಶಿಕ್ಷಣ ಪಡೆದ ಲಾಮಾಗಳು ಚೀನಾ, ಟಿಬೆಟ್ ಮತ್ತು ಮಂಗೋಲಿಯಾಗಳಲ್ಲಿ ಪ್ರಚಾರಮಾಡಲು ಸಹಾಯಕರಾದರು. ಆಗಿನಿಂದ ಭಾರತ ಮತ್ತು ಚೀನಾದ ವ್ಯಾಪಾರ, ವ್ಯವಹಾರಗಳು ಸಮುದ್ರಮಾರ್ಗವಾಗಿ ನಡೆಯಲು ಆರಂಭವಾಯಿತು. ಪಾಟಲೀಪುತ್ರ, ಸಿಂಹಳ, ಯವದ್ವೀಪ, ಚಂಪಾ, ಅನ್ನಾಂನ ಬಂದರುಗಳಾದ ಪಾಂಡುರಂಗ ಮತ್ತು ವಿಜಯಪುರಗಳ ಮೂಲಕ ಚೀನಾದ ದಕ್ಷಿಣ ರಾಜಧಾನಿ ಟೊಂಕಿನ್ ಮತ್ತು ಕಿಯಾವ್‌ಚೀಗಳಿಂದ ಹಡಗುಗಳು ಬಂದು ಹೋಗಲಾರಂಭಿಸಿದವು.

ಎಂಟನೆಯ ಶತಮಾನದಲ್ಲಿ ನಳಂದಾದ ವಿದ್ವಾಂಸರಾದ ಶುಭಕರಸಿಂಹ, ವಜ್ರಬೋಧಿ, ವಜ್ರಬೊಧಿಯ ಶಿಷ್ಯ ಅಮೋಘವರ್ಷ ಮೊದಲಾದವರು ಚೀನಾದಲ್ಲಿ ಬೌದ್ಧಧರ್ಮ ಪ್ರಚಾರ ಹಾಗೂ ಭಾಷಾಂತರ ಕಾರ್ಯದಲ್ಲಿ ಪ್ರಮುಖ ಪಾತ್ರವಹಿಸಿದರು. ಅಮೋಘವರ್ಷನು ಭಾರತದಿಂದ ಕ್ಯಾಂಟನ್‌ಗೆ ತನ್ನೊಡನೆ ಸುಮಾರು 500 ಗ್ರಂಥಗಳನ್ನು ಕ್ರಿ. ಶ. 720 ರಲ್ಲಿ ತೆಗೆದುಕೊಂಡು ಹೋಗಿದ್ದನು.

ಹತ್ತನೆಯ ಶತಮಾನದಲ್ಲಿ ನಳಂದಾದ, ಧರ್ಮದೇವ ಮಂಜುಶ್ರೀ ಮತ್ತು ಬುದ್ಧ ಕೀರ್ತಿ ಮುಂತಾದ ವಿದ್ವಾಂಸರು ಚೀನಾದಲ್ಲಿ ಸುಮಾರು ಎರಡುನೂರು ಗ್ರಂಥಗಳನ್ನು ಭಾಷಾಂತರಿಸಿದರು. ಚೀನಾಗೆ ಕ್ರಿಸ್ತಶಕ 1036 ರ ನಂತರ ಹೋದ ಭಾರತೀಯ ವಿದ್ವಾಂಸರ ಹೆಸರುಗಳು ತಿಳಿಯದಾಗಿವೆ ಉತ್ತರಭಾರತದಲ್ಲೆಲ್ಲಾ ಮಹಮ್ಮದೀಯರ ಪ್ರಾಬಲ್ಯ ಹೆಚ್ಚಾಗಿ ಬೌದ್ಧವಿಹಾರಗಳೂ ಪುಸ್ತಕಾಲಯಗಳೂ ದೇವಾಲಯಗಳೂ ಧ್ವಂಸವಾಗಿ ಮಸೀದಿಗಳಾಗಿ ಮಾರ್ಪಡುತ್ತಿದ್ದುದರಿಂದ ಭಾರತೀಯರು ತಮ್ಮ ರಕ್ಷಣೆಗಾಗಿ ಹೋರಾಡುತ್ತಿದ್ದುದೇ ಇದಕ್ಕೆ ಮುಖ್ಯಕಾರಣ.

ಕ್ರಿಸ್ತಶಕ 12೨8 ರಲ್ಲಿ ಚೀನಾದ ಚಕ್ರವರ್ತಿ ಕುಬ್ಲೈಖಾನ್ ವಿವಿಧ ಧಾರ್ಮಿಕ ವಿದ್ವಾಂಸರ ಒಂದು ಮಹಾಸಭೆಯನ್ನು ಏರ್ಪಡಿಸಿದನು. ಅದರಲ್ಲಿನ ಧಾರ್ಮಿಕವಿಷಯಗಳ ಚರ್ಚೆಯಲ್ಲಿ 200 ಟಾವ್ ಧರ್ಮದ ವಿದ್ವಾಂಸರೂ 200 ಕಾನ್‌ಫ್ಯೂಷಿಯಸ್ ಧರ್ಮದ ವಿದ್ವಾಂಸರೂ ೩00 ಬೌದ್ಧಧರ್ಮದ ವಿದ್ವಾಂಸರೂ ಭಾಗವಹಿಸಿದ್ದರು. ಮಧ್ಯ ಏಷ್ಯಾದ ಬೌದ್ಧದೇಶಗಳ ರಾಜಗುರುವೂ ಶಾವ್‌ಲೀ ದೇವಾಲಯದ ಪ್ರಧಾನ ಪುರೋಹಿತನೂ, ಟಿಬೆಟ್ಟಿನ ಶಾಕ್ಯ ಪಂಡಿತನ ಬಂಧುವೂ ಆದ ಫಾಗ್ಸ್‌ಪಾಲಿನ ಅಸಾಧಾರಣ ಪಾಂಡಿತ್ಯದಿಂದ ಬೌದ್ಧಧರ್ಮಕ್ಕೆ ಜಯವಾಗಲು ಬೌದ್ಧರು ಕಳೆದುಕೊಂಡಿದ್ದ 237 ಧಾರ್ಮಿಕ ಸಂಸ್ಥೆಗಳನ್ನು ಮತ್ತೆ ಪಡೆದುಕೊಳ್ಳಲು ಅವಕಾಶವಾಯಿತು. ಚೀನೀ ಚಕ್ರವರ್ತಿಯು ಫಾಗ್ಸ್‌ಪಾವನ್ನು ತನ್ನ ರಾಜ ಗುರುವಾಗಿಯೂ ಚೀನಾದ ಬೌದ್ಧ ಸಂಸ್ಥೆಗಳ ಅಧ್ಯಕ್ಷನನ್ನಾಗಿಯೂ ನೇಮಿಸಿ ಬೌದ್ಧ ಧರ್ಮವು ಚೀನಾದಲ್ಲಿ ಶಾಶ್ವತವಾಗಿ ಉಳಿಯುವಂತೆ ಮಾಡಿದನು. ಈ ಕಾಲದಲ್ಲಿ ನಿರ್ಮಿತವಾದ ಸಂಸ್ಕೃತ, ಚೀನೀ ಮತ್ತು ಟಿಬೆಟ್ಟಿನ ಭಾಷೆಯ ಬೌದ್ಧಗ್ರಂಥಗಳ ಸೂಚಿಯು ಈಗಲೂ ಅತ್ಯಮೂಲ್ಯವಾಗಿದೆ.

ಹದಿನಾಲ್ಕನೆಯ ಶತಮಾನದಿಂದ ಬೃಹದ್ಭಾರತದ ಹಿಂದೂ ಬೌದ್ಧ ಸಾಮ್ರಾಜ್ಯಗಳಾಗಿದ್ದ ಜಾವಾ, ಮಲಯ ಸುಮಾತ್ರಾದಿಂದ ಫಿಲಿಪ್ಪೈನ್ಸ್ ವರೆಗಿದ್ದ ಶ್ರೀವಿಜಯ. ಹಿಂದೂ ಚೀನಾದ ಚಂಪಾ ಕಾಂಭೋಜ ಮೊದಲಾದವೂ ಮಲೇಶಿಯಾ ಮತ್ತು ಜಾವಾಗಳಲ್ಲಿ ಮಹಮ್ಮದೀಯರ ಪ್ರಾಬಲ್ಯದಿಂದ ಭಾರತದಿಂದ ಬೇರ್ಪಟ್ಟು ಭಾರತ ಮತ್ತು ಚೀನಾದ ಜಲಮಾರ್ಗ ಸಂಬಂಧವೂ ಕೊನೆಗೊಂಡಿತು

# ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ, ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣೆಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರೂ. 2500 ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಿಲ ಮೇಲಿದ್ದು ನೋಡಬಹುದು. ಗೃಹಸ್ಥರಿಗೆ ವಸ್ತ್ರ ಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿವುಳ್ಳ 5 ಗ್ರಾಂ ತೂಕದ ಬಂಗಾರದ ಪದಕ ಕೊಡಲ್ಪಡುತ್ತದೆ, ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಅನುಮತಿಸಲಾಗುತ್ತದೆ.

ತಿರುಮಲ ತಿರುಪತಿ ದೇವಸ್ಥಾನ.

(14 ನೇ ಪುಟದಿಂದ)

ನ ದೈವಸ್ಯಾತಿಭಾರೋಸ್ತಿ ನ ಚೈವಾ
ನ್ಯಾತಿ ವರ್ತನಂ
ಇತಿ ಜಾಸ್ಯಾಗಮಂ ಭೂಯೋ ದೈವಸ್ಯ
ಪ್ರತಿಪಾಲನೇ ||

(ದೈವ ಇಚ್ಛಿಸಿದರೆ ಏನು ಬೇಕಾದರೂ ಆಗಬಹುದು. ದೈವೇಚ್ಛೆಯಿಂದ ನಮ್ಮ ಸುಖಗಳು ಪುನರಾಗಮಿಸಬಹುದು.)

ಯ ಏವ ಹೇತುರ್ಭವತಿ ಪುರುಷಸ್ಯ
ಜಯಾವಹಃ
ಪರಾಜಯೇಽಪಿ ಹೇತುಶ್ಚ ಸ ಇತಿ
ಪ್ರತಿಪಾಲಯೇ ||

(ಯಾವ ಒಂದು ಕಾಲವೋ ವಿಷಯವೋ ಒಂದುಸಲ ಜಯಕ್ಕೂ ಕಾರಣವಾಗಬಹುದು. ಅದೇ ಅಪಜಯಕ್ಕೂ ಕಾರಣವಾಗಬಹುದು)

ದತ್ವಾ ಯಾಚಂತಿ ಪುರುಷಾಃ ಹತ್ವಾ
ವಧ್ಯಂತಿ ಚಾಪರೇ

(ದಾನಿಯಾದವನು ಯಾಚಕನೂ ಆಗಬಹುದು. ಯಾಚಕನು ಧನಿಕನೂ ಆಗಬಹುದು. ಕೊಲ್ಲುವವನು ತಾನೂ ಒಂದು ದಿನ ವಧ್ಯನಾಗುತ್ತಾನೆ)

ಸ್ಥಿತಂ ಪೂರ್ವಂ ಜಲಂ ಯತ್ರ
ಪುನಸ್ತತ್ರೈವ ಗಚ್ಛತಿ
ಇತಿ ಪರ್ಯಾಯ ವಿಚ್ಛಂತೀ ಪ್ರತೀಕ್ಷ್ಯೇ
ಉದಯಂ ಪುನಃ ||

(ಕೆರೆಯ ನೀರು ಒಣಗಿಹೋಗಿ ಪುನಃ ತುಂಬುತ್ತದೆ. ನೀರಿಲ್ಲದಿರುವುದೂ ಶಾಶ್ವತವಿಲ್ಲ. ಪರ್ಯಾಯವಾಗಿ ಇದು ನಡೆಯುತ್ತಲೇ ಇರುವುದು. ಹಾಗೆಯೇ ನಾವು ನಮ್ಮ ಜೀವನದಲ್ಲಿ ಪರ್ಯಾಯವನ್ನೇ ಕಾಣುತ್ತಿರಬೇಕು.)

ಸ್ತ್ರೀಣಾಂ ಚಿತ್ತಂಚ ಮಜ್ಞೇಯಂ
ಯುಕ್ತರೂಪಾ ಚ ಮೇಮತಾ

(ಹೆಂಗಸರ ಮನಸ್ಸಿನಲ್ಲಿರುವುವನ್ನು ತಿಳಿಯುವುದು ದುಸ್ಸಾಧ್ಯವೇ ಸರಿ)

ನನು ನೀತಿಃ ಸುನೀತಸ್ಯ ಶಕ್ಯತೇಽನ್ಯೈ
ನೇಷಿತುಂ ಪರೈಃ

(ನೀತಿಸಂಪನ್ನನಾದವನ ನೀತಿಯು ಬೇರೆಯವರಿಗೆ ತಿಳಿಯಲು ಸಾಧ್ಯವಿಲ್ಲ.

# ಶ್ರೀ ವೆಂಕಟೇಶ ಪ್ರಪತ್ತಿ

ಶ್ರೀರಮಾದೇವಿಯೆ! ಶ್ರಿತಸರ್ವಭುವನೆ!
ವೆಂಕಟಾಚಲವಾಸ ವಿಷ್ಣುವಲ್ಲಭೆಯೆ!
ಸ್ವಾಮಿಯ ಎದೆಯಲ್ಲಿ ವಸಿಸುವಾ ಜಾಣೆ!
ಸ್ವಾಮಿ ತಾಳ್ಮೆಯ ಮುಂದುವರಿಸುವ ತಾಯೆ!
ವಾತ್ಸಲ್ಯ ಮಿಗಿಲಾದ ವರಗುಣಾಭರಣೆ!
ಪದ್ಮ ಶೋಭಿತ ಹಸ್ತಪಲ್ಲವ ಯುಗಳೆ!
ಪದ್ಮಾಸನಾಸೀನೆ! ಭಾಗ್ಯಸಂಪೂರ್ಣೆ!
ಶರಣೆಂದು ನಮಿಸುವೆನು ಜಗದಂಬೆ! ನಿನಗೆ 1

ಶ್ರೀಯುಕ್ತ! ಕರುಣಾಬ್ಧಿ! ಸೃಷ್ಟ್ಯಾದಿಮೂಲ!
ಸರ್ವಜ್ಞ! ಶಕ್ತ್ಯಾತ್ಮ! ಸರ್ವಾಧಿಕಾರಿ!
ಸಾಧು ಭಕ್ತಾಶ್ರಿತಜನಕಲ್ಪಭೂಜ!
ತವಪಾದ ಭಜಿಸುವೆನು ಶ್ರೀವೆಂಕಟೇಶ! 2

ಅಂದುಗೆ ಪರ್ಯಂತವರ್ಪಿತವಾದ
ಜಾತಿ ಹೂಗಳಿಗಿತ್ತು ಸೌರಭಾಧಿಕವ
ಒಳ್ಪಾಗಿ ನಿಂತು ನಿತ್ಯೋತ್ಸವ ಕೊಡುವ
ತವಪಾದ ಭಜಿಸುವೆನು ಶ್ರೀವೆಂಕಟೇಶ! 3

ವರ್ಣರಂಜಿತವಾಗಿ ಪರಿಮಳತುಂಬಿ
ತನಿಯಾಗಿ ಬಿರಿದೆದ್ದ ತಾವರೆಯ ಸೊಬಗ
ಮೀರುತ ಬಲುಕಾಂತಿ ತುಳುಕಿಸುವ
ತವಪಾದ ಭಜಿಸುವೆನು ಶ್ರೀವೆಂಕಟೇಶ! 4

ಪರತತ್ತ್ವ ತಿಳಿಸುವ ಧ್ವಜ ಸುಧಾಕುಂಭ
ಶಂಖ ಚಕ್ರಾಂಕುಶ ಛತ್ರಾಬ್ಜ ವಜ್ರ
ಸುರವೃಕ್ಷ ರೇಖಾಳಿ ಸೊಗಸಾಗಿ ತಳೆದ
ಶ್ರೀಪಾದ ಭಜಿಸುವೆನು ಶ್ರೀವೆಂಕಟೇಶ! 5

ಪದ್ಮರಾಗದ ಕೆಳಭಾಗದ ಕಾಂತಿ
ಇಂದ್ರನೀಲದ ಮೇಲಕಿರುವಂಥ ಕಾಂತಿ
ಶಶಿಯನ್ನು ನಖಕಾಂತಿ ಜಯಿಸಿ ಶೋಭಿಸುವ
ತವಪಾದ ಭಜಿಸುವೆನು ಶ್ರೀವೆಂಕಟೇಶ! 6

ಪ್ರೀತಿ ಭೀತಿಗಳಿಂದ ಶ್ರೀಲಕ್ಷ್ಮಿ ಗೈವ
ತೀರ ಕೈಸೇವೆಗೆ ತಳಮಳ ಪಡುವ
ಸ್ತುತಿಗು ಊಹೆಗು ಮೀರಿ ಸುಕುಮಾರವಾದ
ಶ್ರೀಪಾದ ಭಜಿಸುವೆನು ಶ್ರೀವೆಂಕಟೇಶ! 7

ಇಂದಿರೆ ಭುವಿ ನೀಳೆ ಇತ್ಯಾದಿಯಾದ
ಧನ್ಯದೇವಿಯರ ಕೈದಳಿರುಗಳಿಂದ
ಅರುಣಾರುಣ ಪ್ರಭೆ ಹತ್ತಿದಂತಿರುವ
ಶ್ರೀಪಾದ ಭಜಿಸುವೆನು ಶ್ರೀವೆಂಕಟೇಶ! 8

ಪ್ರಣತಿ ಮಾಡುವ ಪದ್ಮಭವ ಶಿವಾದಿಗಳ
ಘನಮೌಳಿ ನವರತ್ನ ಕಾಂತಿ ಸಂದೋಹ
ನಿತ್ಯ ನೀರಾಜನ ನಿಯಮದಿ ಹೊಳೆವ
ಶ್ರೀಪಾದ ಭಜಿಸುವೆನು ಶ್ರೀವೆಂಕಟೇಶ! 9

ಪಡೆದು 'ವಿಷ್ಣೋಃ ಪದೇಪರ' ವೆಂಬ ಕೀರ್ತಿ
ಹೊಂದಿ ಭಾಗ್ಯವ 'ಮಧ್ವಉತ್ಸ' ಎಂಬಂತೆ
ಸುಖವೃದ್ಧಿಗಾಗಿ ನೀ ಸೂಚಿಸುತಿರುವ
ಶ್ರೀಪಾದ ಭಜಿಸುವೆನು ಶ್ರೀವೆಂಕಟೇಶ! 10

ಅನುರೂಪ ಸಾರಥಿಯಾಗಿ ಪಾರ್ಥನಿಗು
ದಾಸನಾಗಿರಲೆಂದು ದಯೆತೋರಿ ನೀನೆ
ಎನಗೂ ಕೈಚಾಚಿ ತೋರಿಹ ಘನವಾದ
ಶ್ರೀಪಾದ ಭಜಿಸುವೆನು ಶ್ರೀವೆಂಕಟೇಶ! 11

ಕಾಳೀಯ ಫಣಗಳ ಗಹನ ಭೂಮಿಗಳ
ಶೇಷಾದ್ರಿಶಿರ ವೇದಶಿರ ನನ್ನ ಶಿರವ
ಸಾಧು ಭಕ್ತರ ಚಿತ್ತ ಸಮವಾಗಿ ತುಳಿವ
ತವಪಾದ ಭಜಿಸುವೆನು ಶ್ರೀವೆಂಕಟೇಶ! 12

ಧರೆಗಿತ್ತ ಸೊಗಸಾದ ತನಿಹೂಗಳಂತೆ
ಶೇಷಾದ್ರಿ ಶಿಖರಕ್ಕೆ ಸಿಂಗಾರವಾಗಿ
ಹೃದಯ ನೇತ್ರಾನಂದವೆಲ್ಲರಿಗೀವ
ತವಪಾದ ಭಜಿಸುವನು ಶ್ರೀವೆಂಕಟೇಶ! 13

ಪ್ರಥಮ ಸೇವ್ಯಗಳಾಗಿ ಬಹುಸಾಧು ಜನಕೆ
ಹಸುಳೆಗೆ ತಾಯ ಸ್ತನ್ಯವನು ಹೋಲುವಾ
ಅಮೃತಕ್ಕೆ ಎಣೆಯಾಗಿ ಸಮ ಕಾಣದಿರುವಾ
ತವಪಾದ ಭಜಿಸುವೆನು ಶ್ರೀವೆಂಕಟೇಶ! 14

ಸಂತರಿಗನಿಶವು ಸಂಸೇವ್ಯನಾಗಿ
ಭವತಾಪ ಕಳೆಯುವ ವಾತ್ಸಲ್ಯನೇತ್ರ
ಯತಿಚಂದ್ರ ಸೌಮ್ಯೋಪಯಂತ್ರ ತೋರಿರುವ
ತವಪಾದ ಭಜಿಸುವೆನು ಶ್ರೀವೆಂಕಟೇಶ! 15

ಶ್ರೀಲಕ್ಷ್ಮಿ ಚತುರತೆ ಹೆದರಿಕೆ ಬೆರೆತು
ಆರಾಧಿಸಲು ನಿತ್ಯವಾಶ್ರಯ ಕೊಟ್ಟ
ಸೌಜನ್ಯಗುಣಮಾನ್ಯ! ಸರ್ವದಾ ನಿನ್ನ
ಶ್ರೀಪಾದ ಭಜಿಸುವೆನು ಶ್ರೀವೆಂಕಟೇಶ! 16

ಕನ್ನಡಾವತರಣ:

**ಶ್ರೀ ಜಿ. ಚೆನ್ನಯ್ಯ, ಎಂ.ಎ.,**

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಸಂಪರ್ಕಿಸಿ

**ಆಡಳಿತ ನಿರ್ವಹಣಾಧಿಕಾರಿ**
ತಿ. ತಿ. ದೇ. ತಿರುಪತಿ.



# ಗೃಹಲಕ್ಷ್ಮಿ



## ಕಲ್ಯಾಣೀದೇವಿಯರು

**ಶ್ರೀನಿವಾಸ ಮಠದ**

ನಮ್ಮ ಶಾಸ್ತ್ರಗ್ರಂಥಗಳಲ್ಲಿ ವೇದಗಳಿಗೆ ಸ್ತ್ರೀಯರು ಅನಧಿಕಾರಿಗಳು ಎಂದು ಹೇಳಿದ್ದರೂ, ಆ ಜ್ಞಾನಕ್ಕೆ ಮಾತ್ರ ಅಧಿಕಾರಿಗಳಲ್ಲವೆಂದು ಹೇಳಲಾಗದು. ಶ್ರೀ ವೇದವ್ಯಾಸರು ಅವರಿಗಾಗಿಯೇ ಶ್ರೀಮನ್ ಮಹಾಭಾರತದಂತಹ ಅಮೂಲ್ಯಗ್ರಂಥರತ್ನವನ್ನು ರಚಿಸಿ ಮಹೋಪಕಾರ ಮಾಡಿರುವರು. ಆ ಪುರಾಣಗ್ರಂಥಗಳ ಶ್ರವಣದಿಂದ, ಶಾಸ್ತ್ರಜ್ಞಾನದಿಂದ ಅನೇಕ ಹರಿಶರಣೆಯರು ಮಹಾ ಪಂಡಿತೆಯರಾಗಿ ಶೋಭಿಸಿದರು.

ನಮ್ಮ ಕರ್ನಾಟಕ ರಾಜ್ಯದಲ್ಲಿ ಅನೇಕ ಸಾಧ್ವಿಯರು ಪಂಡಿತೆಯರಾಗಿ, ಕವಯಿತ್ರಿಗಳಾಗಿ ಕನ್ನಡ ಸಂಸ್ಕೃತ ಸಾಹಿತ್ಯಗಳನ್ನು ತಮ್ಮ ಗಾಥೆಗಳಿಂದ ಸ್ತೋತ್ರಪದಗಳಿಂದ ಊರ್ಜಿತಗೊಳಿಸಿದ್ದಾರೆ. ಅವರ ಪೈಕಿಯೂ ಎಲೆಮರೆಯ ಕಾಯಂತೆ ಇದ್ದುಕೊಂಡು ಜನತೆಗೆ ಪರಮೋಪಕಾರ ಮಾಡಿದ ವನಿತಾ ವಿಭೂತಿಗಳಲ್ಲಿ ಶ್ರೀ ಕಲ್ಯಾಣೀದೇವಿಯವರು ಒಬ್ಬರಾಗಿದ್ದಾರೆ.

ಶ್ರೀಮಜ್ಜಗದ್ಗುರುಗಳಾದ ಶ್ರೀಮನ್ ಮಧ್ವಾಚಾರ್ಯರ ಪೂರ್ವಾಶ್ರಮದ ಸೋದರಿಯರು ಶ್ರೀ ಕಲ್ಯಾಣೀದೇವಿಯರಾಗಿದ್ದಾರೆ. ಶ್ರೀ ಮಧ್ವಾಚಾರ್ಯರು ಚಿಕ್ಕಮಗುವಾಗಿದ್ದಾಗ, ತಾಯಿಯು ಈ ಚಿಕ್ಕಮಗುವನ್ನು ಆಡಲು ಬಿಟ್ಟು, ಸೋದರಿಗೆ ನೋಡಿಕೊಳ್ಳಲು ಹೇಳಿ ನೆರೆಮನೆಗೆ ಕೆಲಸಕ್ಕೆಂದು ಹೋದಳು. ಕೆಲಹೊತ್ತಿನಲ್ಲಿ ಮಗುವು ಅಳಲಾರಂಭಿಸಿತು. ಮಗುವನ್ನು ಅನೇಕ ಬಗೆಗಳಿಂದ ಸಮಾಧಾನ ಪಡಿಸಲು ಯತ್ನಿಸಿ ವಿಫಲಳಾದ ಸೋದರಿಯು ಬೆಕ್ಕಿಂದು ಇಟ್ಟ ನೆನೆಸಿದ ಹುರಳಿಕಾಳನ್ನು ಮಗುವಿಗೆ ತಿನ್ನಲು ಕೊಟ್ಟಳು. ಅದನ್ನು ನಾಕಷ್ಟು ತಿಂದು ಶಿಶುವು ಆಡುತ್ತಿದ್ದಿತು. ತಾಯಿಯು ಮನೆಗೆ ಬಂದು ಇದನ್ನು ಕೇಳಿ ಮಗುವಿಗೆ ಏನಾಗುವದೋ ಎಂದು ಹೆದರಿದಳು. ಆದರೆ ಪೂರ್ವವಿಷವನ್ನೇ ಜೀರ್ಣಿಸಿಕೊಂಡ ಬಂಡಿ ಅನ್ನವನುಂಡ ಕೂಸಿಗೆ ಏನೂ ಬಾಧೆ ಆಗಲಿಲ್ಲ. ತಾಯಿಯು ಮೊದಲಿನಂತೆ ಆಡುತ್ತಿದ್ದ ಆ ಕೂಸನ್ನು ಕಂಡು ವಿಸ್ಮಿತಳಾದಳು. ಈ ಘಟನೆಯ ನಂತರದಲ್ಲಿ ಸೋದರಿಯಾದ ಶ್ರೀಕಲ್ಯಾಣೀದೇವಿಯರಿಗೆ ಶ್ರೀಮಧ್ವಾಚಾರ್ಯರ ಅನುಗ್ರಹ ದೊರೆಯಿತೇ ಹೊರತು ಅವಗ್ರಹವೇನೂ ಆಗಲಿಲ್ಲ.

ಶ್ರೀ ಕಲ್ಯಾಣೀದೇವಿ ಮಹಾಪಂಡಿತೆಯೂ, ಕವಯಿತ್ರಿಯೂ, ಆಧ್ಯಾತ್ಮಯೋಗಿಯೂ ಆಗಿದ್ದರು. ಶ್ರೀ ಮಧ್ವಾಚಾರ್ಯರ ದ್ವಾದಶ ಸ್ತೋತ್ರದ ಧಾಟಿಯಲ್ಲಿಯೇ ಅನೇಕ ಗಾಥೆಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಶ್ರೀಗೋವಿಂದಸ್ತೋತ್ರ' ಆ[illegible]ಸ್ತುತಿ, ಶ್ರೀ ಮುಕುಂದಸ್ತೋತ್ರ, ಪೂರ್ಣಬೋಧಸ್ತೋತ್ರ ಹಾಗೂ ತಾರತಮ್ಯಸ್ತೋತ್ರ, – ಇವು ಮುಖ್ಯವಾಗಿವೆ

ಇವರ ಸಂಸ್ಕೃತವಾಣಿಯು ಪ್ರಾಸಬದ್ಧವೂ, ಮಧುರವೂ ಸುಂದರವೂ ಆಗಿದೆ. ಇಲ್ಲಿ ಒಂದು ಪದ್ಯವನ್ನು ಕೆಳಗೆ ಉದಾಹರಿಸಲಾಗಿದೆ–

ಇಂದುರುಚಿ ಸುಂದರ ಸುಮಂದ
ಹಸಿತಾಸ್ಯಂ ।
ನಂದ ತನಯಂ ದುರಿತ ಸುದಹನ
ದಕ್ಷಮ್ ।
ಸೇಂದ್ರ ಸುರ ವೃಂದ ಪರಿವಂದಿತ
ಪದಾಬ್ಜಂ ।
ಸಂಸ್ಮರ ಸದಾಂತರ ಮುಕುಂದಮತಿ
ಕಾಂತಮ್ ॥

ಚಂದ್ರನಂತೆ ಸುಂದರ ಮಂದಹಾಸದಿಂದ ಚೆಂದ ಕಾಣುವಮುಖ, ಇಂದ್ರಾದಿ ದೇವವೃಂದದಿಂದ ವಂದಿತ, ಇಂಥ ಮುಕುಂದನನ್ನು ಸರ್ವದಾ ಸ್ಮರಿಸು – ಎಂದು ಮನಸ್ಸಿಗೆ ಉಪದೇಶ ಕೊಡುವ ಈ ಸಾಧ್ವೀಮಣಿಯರ ಶ್ಲೋಕ ಸುಂದರವಾಗಿದೆ.



ಇನ್ನು ಅವರಿಂದ ರಚಿತ "ತಾರತಮ್ಯ ಶ್ಲೋಕಗಳು' ಅತಿಮುಖ್ಯವಾಗಿರುವುದರಿಂದ ಮೊದಲ ಹಾಗೂ ಕೊನೆಯ ಶ್ಲೋಕಗಳನ್ನು ಕೆಳಗೆ ಕೊಡಲಾಗಿದೆ.

ವಿಷ್ಣುಃ ಸರ್ವೋತ್ತಮೋಥ ಪ್ರಕೃತಿ
ರಥ ವಿಧಿಪ್ರಾಣ ನಾಥಾವಥೋತ್ತೇ
ಬ್ರಹ್ಮಾಣೀ ಭಾರತೀಚ ದ್ವಿಜಫಣಿಪ
ಮೃಡಾಶ್ಚ ಸ್ತ್ರಿಯಃ ಷಟ್ ಚ ವಿಷ್ಣೋಃ।
ಸೌಪರ್ಣೀ ವಾರುಣೀ ಪಾರ್ವತಿ –
ಪತಿ ತನಯಾ ಚೇಂದ್ರ ಕಾಮಾ –
ವಥೋಸ್ಮಾನ್
ಪ್ರಾಣೋಥೋ ಯೋಽನಿರುದ್ಧೋ ರತಿ
ಮನು ಗುರವೋ ದಕ್ಷರಚ್ಯಾಚ್ ಪಾಂತು॥
ಸರ್ವೋತ್ತಮೋ ವಿಷ್ಣುರಥೋ ರಮಾ ಚ
ಬ್ರಹ್ಮಾ ಚ ವಾಯುಶ್ಚ ತದೀಯಪತ್ನ್ಯೌ॥
ಅನ್ಯೇ ಚ ದೇವಾಃ ಸತತಂ ಪ್ರಸನ್ನಾ
ಹರೌ ಸುಭಕ್ತಿಂ ಮಯಿಸಂದಿಶಂತು॥

ಇಂಥ ಪರಮಜ್ಞಾನಿಗಳೂ ಹರಿಪಾದರತರೂ ಆದ ಕಲ್ಯಾಣೀ ದೇವಿಯರನ್ನು ಪಡೆದ ಕನ್ನಡ ಮಾತೆಯೇ ಧನ್ಯಳು. ★

ಶ್ರೀ ಪದ್ಮಾವತೀ ದೇವಾಲಯ



ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಪದ್ಮಾವತೀದೇವಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ವ್ಯಕ್ತಿಗಳು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಬಾಂಧವ್ಯ ಗೀತೆಗಳು

ಶ್ರೀ ಬಿ. ವಿ. ವೇಣುಗೋಪಾಲ

ಬೀಸುವ ಕಲ್ಲಿನ ಮಂಜುಳ ನಾದದ ಜೊತೆ ಜೊತೆಗೆ ಹುಟ್ಟಿದವು ಜಾನಪದ ಗೀತೆಗಳು. ಹೆಣ್ಣು ತನ್ನ ಕಷ್ಟ ಸುಖಗಳನ್ನು ಹಾಡಿನ ಮೂಲಕ ಹಾಡಿ ಮನವನ್ನು ಹಗುರಾಗಿಸಿಕೊಳ್ಳುತ್ತಾಳೆ. ಈ ಬೆಳಗಿನ ಜಾವದ ಹಾಡುಗಳಲ್ಲಿ ನಮಗೆ ಮುಖ್ಯವಾಗಿ ಕಂಡು ಬರುವುದು ಹೆಣ್ಣಿನ ಬಾಳಿನ ಅನುಭವ

ಬೀಸುವ ಪದಗಳಲ್ಲಿ ಬಂದಿರುವ ಬಾಂಧವ್ಯ ಗೀತೆಗಳನ್ನು ನೋಡಿದಾಗ ಹೆಣ್ಣಿನ ಮತ್ತು ಆಕೆಯ ಪರಿಸರದವರ ಬಾಂಧವ್ಯವನ್ನು ನಾವು ಕಾಣಬಹುದು. ಇವುಗಳಲ್ಲಿ ಹೆಣ್ಣು ತೌರು, ಸತಿ–ಪತಿಯರ ಬಾಂಧವ್ಯ, ಹೆಣ್ಣಿನ ಅಣ್ಣ ತಮ್ಮ, ಅಕ್ಕ-ತಂಗಿ, ತಾಯಿ–ಮಕ್ಕಳ ಬಾಂಧವ್ಯಗಳನ್ನು ಮುಖ್ಯವಾಗಿ ಕಾಣಬಹುದು.

## ಹೆಣ್ಣು ತೌರು :

ತಾಯಿಯೇ ತೌರು, ತೌರು ಎಂದರೆ ತಾಯಿ ಹೆಣ್ಣಿನ ಬಾಳಿಗೆ ಹೆಣ್ಣಿನ ತೌರಿನ ಬಗ್ಗೆ ಅಭಿಮಾನ ಅತಿಯಾಗಿರಲು ತಾಯಿಯೇ ಕಾರಣ. ಏಕೆಂದರೆ–

ಯಾರು ಆದರೂ ಹೆತ್ತ ತಾಯಂತೆ ಆದಾರೋ
ಸಾವಿರ ಸೌದೆ ಒಲೆಯಲ್ಲಿ-ಉರಿದಾರು
ದೀವಿಗೆ ಯಂತೆ ಬೆಳಕುಂಟೇ

ಎನ್ನುತ್ತಾಳೆ ಜಾನಪದ ಗರತಿ. ಸಾವಿರ ಸೌದೆ ಉರಿದರೂ ಅದು ಬೆಂಕಿಯ ಶಾಖ ಅಷ್ಟು ಸೌದೆ ಬೆಳಕು ಒಂದು ದೀವಿಗೆಯ ಬೆಳಕಿಗೆ ಸಾಟಿಯಲ್ಲ. ಆ ದಿವ್ಯಜ್ಯೋತಿ ತನ್ನ ತಾಯಿ ಎನ್ನುತ್ತಾಳೆ ಆ ಹೆಣ್ಣು.

ತೌರಿನ ಬಗೆಗೂ ತನ್ನ ಅಭಿಮಾನ ಕಡಿಮೆಯಿಲ್ಲವೆಂಬಂತೆ ಹೆಣ್ಣು ಹೇಳುತ್ತಾಳೆ.

ತವರೂರ ಹಾದೀಲಿ ಕಲ್ಲಿಲ್ಲ ಮುಳ್ಳಿಲ್ಲ
ಸಾಸಿವೆಮೆಯ್ಯಯರಳಿಲ್ಲ–ಬಾನಲ್ಲಿ
ಬಿಸಿಲಿನ ಬೇಗೆ ಸುಡಲಿಲ್ಲ

ಮತ್ತು ತೌರೂರು ಹಾದೀಲಿ "ನೀರ ಮೇಲೆ ನೀರು ಸಿಕ್ಕುತ್ತದೆ, ಎಂದು ಅಲ್ಲಿನ ಸಮೃದ್ಧತೆಯನ್ನು ಸೂಚಿಸುತ್ತಾಳೆ. ತನ್ನ ಆಸೆ ಏನೆಂದರೆ–

ಕಣ್ಣಿಗೆ ಕಪ್ಪಾಸೆ, ಬಣ್ಣಕೆ ಸೆರಗಾಸೆ
ಹೆಣ್ಣು ಮಕ್ಕಳಿಗೆ ತವರಾಸೆ–ತಾಯಮ್ಮ
ನಿನ್ನಾಸೆ ನನಗೆ ಅನುಗಾಲ

ಅಲ್ಲದೆ "ಹಡೆದವ್ವ ನೀ ತಂಪು ನನ್ನ ತವರೀಗೆ" ಎನ್ನುತ್ತಾ ತನ್ನ ಮನಕ್ಕೂ ಆಕೆಯು ತಂಪನೀಯುವ ಚಿಲುಮೆ ಎನ್ನುತ್ತಾಳೆ

ತಾಯಿಯೂ ತನ್ನ ಮಗಳನ್ನು ತೌರಿನಲ್ಲಿ ಅನೇಕ ಬಾರಿ ನೆನೆಯುತ್ತಾಳೆ. ಮಗಳ ನೆನಪನ್ನು ತರುವ ಅನೇಕ ಸನ್ನಿವೇಶಗಳು ಮೂಡಿಬರುತ್ತವೆ. ತನ್ನೂರಿನ ಹೆಣ್ಣೊಂದನ್ನು ಹಸೆಯ ಮೇಲೆ ಕಂಡಾಗ ಮಗಳ ಚಿತ್ರ ಮನದಲ್ಲಿ ಮೂಡುತ್ತದೆ.

ತಾಯಮ್ಮ ತನಮಗಳ ಏನಂತ ನೆನೆದಾಳ
ಹೊಸಬಣ್ಣ ಉಟ್ಟು ಹಸೆ ಮೇಲೆ ನಿಂತ್ಕೊಂಡು
ತಾಯಮ್ಮ ಮಗಳ ಕರೆದಾಳೋ

ಸಂತೆಯಲ್ಲಿ, ಜಾತ್ರೆಯಲ್ಲಿ ಸುತ್ತಾಡುವಾಗ ಹೂಮಾರುವವರ ಸಾಲಿನಲ್ಲಿ, ಬಿ[illegible] ಮ[illegible]ನ್ನು ಕಂಡಾಗ ಆವಳ ಕಣ್ಣು ಮಗಳಿಗಾಗಿ ಹುಡುಕುತ್ತದೆ ತನ್ನ ಮಗಳ ತಲೆ ತುಂಬಾ ಹೂ ಮುಡಿಸಿ ಬಳೆ ತೊಡಿಸಬೇಕೆಂದು ಹಂಬಲಿಸುತ್ತದೆ ಇಂತಹ ಸಂದರ್ಭದಲ್ಲಿ ಬರುವ ಗೀತೆಗಳು ಅತ್ಯಂತಧ್ವನಿಪೂರ್ಣವಾಗಿವೆ.

## ಸತಿ ಪತಿಯರ ಬಾಂಧವ್ಯ :

ಹೆಣ್ಣಿನ ಬಾಳಿನ ಮಹತ್ವಪೂರ್ಣವಾದ ಎರಡನೇ ಘಟ್ಟವು ಮೊದಲಾಗುವುದು ಗಂಡನ ಮನೆಯಲ್ಲಿ ಆಕೆ ತನ್ನ ಬಾಳಿನ ಹೆಚ್ಚು ಕಾಲ ಕಳೆಯುವುದು ಅಲ್ಲಿಯೇ. ಆದ್ದರಿಂದ ನಮಗೆ ಆಕೆಯ ಅತ್ತೆಯ ಮನೆಗೆ ಸಂಬಂಧಪಟ್ಟಂತೆ, ಅದರಲ್ಲೂ ಕೈಹಿಡಿದ ಪತಿಯ ಬಗ್ಗೆ ಬಹಳಷ್ಟು ಗೀತೆಗಳು ಕಂಡುಬರುತ್ತವೆ. ಇವರಿಬ್ಬರ ಸಂಬಂಧ ತ್ರಿಪದಿಗಳು ಮನೋಜ್ಞವಾಗಿವೆ. ಗಂಡನಾದವನು ತನ್ನ ಸತಿಯ ಬಗ್ಗೆ ಪ್ರೀತಿಯಿಂದ ಆಡುವ ಮಾತು ಹೀಗಿದೆ.

ಹಾಸಿಗೆ ಹಾಸುಬಾರೇ ಕೂಸು ಕೈಯಲಿ ತಾರೇ
ಚಾಚಿಕೋಗೆ ಜೋತಿ ಉಣಹೋಗೇ ತಮ್ಮಯ್ಯ
ನೀತಿಸ್ಯೇಳ್ಯಾನೆ ಮಡದೀಗೆ

ಇನ್ನೊಂದು ಬಾರಿ ತೌರಿನ ಯೋಚನೆಯಲ್ಲಿದ್ದ ಮಡದಿಯನ್ನು ಹೀಗೆ ಸಾಂತ್ವನ ಗೊಳಿಸುತ್ತಾನೆ

ಹಾಸಿಗೆ ಹಾಸೆಂದ ಮಲ್ಲೀಗೆ ಮುಡಿಯೆಂದ
ಬೇಸತ್ತರ ಮಡದಿ ಮಲಗೆಂದ ನನರಾಯ
ತನನೋಡಿ ತವರ ಮರೆಯೆಂದ

ಪ್ರೇಮದ ಪತಿಯನ್ನು ಸತಿಯೂ ಸಹ ಪ್ರೀತಿಸುತ್ತಾಳೆ. ಆತ ಬೇರೆ ಊರಿಗೆ ಹೋದಾಗ ಆಕೆಗೆ ಅಡುಗೆ ಮಾಡಲೂ ತೋಚದಾಗುತ್ತದೆ.

ಯಾಲಕ್ಕೆ ಕಾಯ್ ಸುಲಿದು ಯಾವಡಗಿ
ಮಾಡಲಿ
ಊರಿಗೋಗ್ಯಾರ ರಾಯರು–ಬಾರದೆ
ಯಾವಡಿಗೆ ಮಾಡಿ ಫಲವೇನು

## ಅಣ್ಣ ತಮ್ಮ, ಅಕ್ಕ ತಂಗಿಯರ ಬಾಂಧವ್ಯ :

ತೌರಿನಲ್ಲಿ ಹುಟ್ಟಿನಿಂದ ಬೆಳೆದು ದೊಡ್ಡವಳಾದ ಹೆಣ್ಣಿಗೆ ತನ್ನ ಒಡಹುಟ್ಟಿದವರ ಹಂಬಲ ಅಷ್ಟೇನು ಕಡಿಮೆ ಎನಿಸುವುದಿಲ್ಲ. ತನ್ನ ಮನೆಯ ಮುಂದೆ ಬೆಳೆದ ಮಲ್ಲಿಗೆಯನ್ನು ಕುರಿತು "ಹೆಚ್ಚೋಗು ನನ್ನ ತವರೀಗೆ" ಎನ್ನುತ್ತಾಳೆ ತನಗೆ ಯಾರೂ ಇಲ್ಲವೆಂದು ಆಕೆ ಯೋಚಿಸುತ್ತಿದ್ದಾಗ ಪ್ರತಿ ಸೂರ್ಯನಂತಿದ್ದ, ಬಿದಿಗೆ ಚಂದ್ರಮನಂತಿದ್ದ ತನ್ನ ಅಣ್ಣನ ಜ್ಞಾಪಕ ಬಂದು ಮನದ ದುಗುಡವೆಲ್ಲ ಮಾಯವಾಗುತ್ತದೆ ಅತ್ತೆಮನೆಯಲ್ಲಿ ಎಷ್ಟೇ ಆಸ್ತಿ ಇರಲಿ, ಇಲ್ಲದಿರಲಿ ತೌರಿನವರು ಕೊಟ್ಟ ವಸ್ತುವಿಗೆ ಹೆಚ್ಚು ಬೆಲೆ. ತೌರಿನವರು ಕೊಟ್ಟ ಸೀರೆಯನ್ನು ಕುರಿತು ಹೀಗೆ ಹೇಳುತ್ತಾಳೆ.

ಕರಿಯ ಸೀರೆಯನುಟ್ಟು ಕೆರೆಯ ನೀರಿಗೆ ಹೋದೆ
ಬೆಲೆಯ ಕೇಳಿದರು ಬಲುಮಂದಿ ನನ್ನೂರ
ದೊರೆ ಮೋಜಿನಣ್ಣ ಉಡಿಸ್ಯಾನೆ

ತನ್ನ ಅಣ್ಣ ತಮ್ಮಂದಿರು ಬಂದು ಹೋಗುತ್ತಿದ್ದರೆ ಆಕೆ ಮನಸ್ಸಿಗೆ ನೆಮ್ಮದಿ; ಇಲ್ಲದಿದ್ದರೆ ಆಕೆ ಹೀಗೆನ್ನುತ್ತಾಳೆ.

ಹಾಲು ಕಾಯದ ಚಿಂತೆ, ಬಾಲನ ತೂಗದ
ಚಿಂತೆ
ಇನ್ಯಾವ ಚಿಂತೆ ನನಗಿಲ್ಲ–ತಮ್ಮಯ್ಯ
ನೀ ಬಾರದ ಚಿಂತೆ ನನಗೊಂದು

ಅಕ್ಕ ತಂಗಿಯರ ಪ್ರೇಮ – ಪ್ರೀತಿಗಳು ಕಡಿಮೆಯೆನಿಸುವುದಿಲ್ಲ. ಈ ಬಾಂಧವ್ಯ ಗೀತೆಗಳಲ್ಲಿ ಒಬ್ಬನೊಬ್ಬರು ನೆನೆಯುವ ಹೊಗಳುವ ಗೀತೆಗಳು ಸಾಕಷ್ಟು ಕಾಣುತ್ತವೆ. "ಉದ್ದನೇ ಬಾಲೀ ನನ್ನ ತಂಗೀ ನಡೆದರೆ ರುದ್ದರನ ತೇರು ಎಳೆದಂತೆ" ಎನ್ನುವ ಅಣ್ಣನ ಅಭಿಮಾನ ನುಡಿಯ ಜೊತೆಗೆ ಆಕೆಯೂ ತಂಗಿಯನ್ನು ಕುರಿತು ಹೀಗೆನ್ನುತ್ತಾಳೆ.

ಬಡವರ ಮಗಳಲ್ಲೆ ನಡುವೊಂದು ಹಿಡಿಯಲ್ಲೆ
ನಡೆದರೆ ಬಾಳೆ ಸುಳಿಯಲ್ಲೆ ತಂಗ್ಯಮ್ಮ
ನುಡಿದರೆ ಕೋಗಿಲೆ ದನಿಯಲ್ಲೆ.

## ತಾಯಿ ಮಕ್ಕಳ ಬಾಂಧವ್ಯ :

ಹೊಟ್ಟೆಯ ಪ್ರಾಣಿಕದ ಹರಳು ಮಗ ಹೆಚ್ಚು ಹೆಣ್ಣಿನ ಬಾಳಿಗೆ. ಹೆಣ್ಣು ಮಗುವಿನ ಪ್ರೀತಿಯನ್ನು ಕೆಳಗಿಳಿಸದೆ ಗಂಡು ಮಗುವಿನ ಪ್ರೀತಿಯನ್ನು ಮೇಲೇರಿಸುತ್ತಾರೆ ಈ ಗರತಿಯರು ತನ್ನ ಮಗ ಆಡಿ ಬಂದರೆ ಅವನ ಕಾಲನ್ನು ತೊಳೆಯಲು ತೆಂಗಿನ ತಿಳಿನೀರನ್ನು ತರುತ್ತಾಳೆ. ಆಕೆ ಬಂಜೆಂಬ ಶಬ್ದವನ್ನು ತಪ್ಪಿಸಿದ ಮಗುವಿನ ಹಲ್ಲು ನೋಡಿದರೆ ಹವಳವು, ನೊಲ್ಲು ಕೇಳಿದರೆ ಆಕೆಗೆ ಹಿತವೆನಿಸುತ್ತದೆ. ಮಗುವು ಪ್ರೀತಿಯ ಜೊತೆಗೆ ಮುದ್ದಿಸುವುದು ಮೂರು ವರ್ಷವಿದ್ದಾಗ ಎಂದು ಹೀಗೆ ಹೇಳುತ್ತಾಳೆ.

ಮುದ್ದು ಮುದ್ದೆಂಬೆನು ಮುಂಬಲ್ಲು ಬರುವಾಗ
ಗೆಜ್ಜೆರಿದಿಗಿಟ್ಟು ನಡೆವಾಗ ಕಂದಯ್ಯನ
ಮುದ್ದೆಂಬೆ ಮೂರು ವರುಷಕೆ

ಈ ತೆರನಾದ ಬಾಂಧವ್ಯ ಜಾನಪದ ಪ್ರಪಂಚದಲ್ಲಿ ಬಹಳಷ್ಟು ಕಂಡು ಬರುವುದು. ಜಾನಪದರ ಭಾವ ಪ್ರಪಂಚ ದೊಡ್ಡದು, ವಿಶಿಷ್ಟವಾದುದು. ಪರಸ್ಪರ ಪ್ರೀತಿ ವಿಶ್ವಾಸದಿಂದ ಜೀವನವನ್ನು ರಸಮಯವಾಗಿಸಿಕೊಳ್ಳುವ ಅವರ ಜಾಣ್ಮೆಯನ್ನು ಜೀವನದ ಸೊಗಸನ್ನು ಚಿತ್ರಿಸುವ ಈ ಬಾಂಧವ್ಯ ಗೀತೆಗಳು ಸತ್ವದಿಂದ ಕೂಡಿ ಆಕರ್ಷಕವೆನಿಸಿವೆ.

---

( 12 ನೇ ಪುಟದಿಂದ )

ನನ್ನನ್ನು ನೀನಲ್ಲದೆ ಇನ್ಯಾವ ರಾಜಕುಮಾರನು ಕಾಪಾಡುತ್ತಾನೆ ? ಮಾನವಜನ್ಮವು ದುರ್ಲಭವೆಂದರಿಯದೆ, ಆದಿಲ್ಲದೆ ಬ್ರಹ್ಮಾನಂದವನ್ನು ಪಡೆಯಲು ಸಾಧ್ಯವಿಲ್ಲವೆಂಬುದನ್ನು ಅರಿಯದೆ ನಾನು ಅಹಂಕಾರ ಮಮಕಾರಗಳು, ಅಸೂಯೆ, ಕಾಮ, ದುರಾಸೆ ಮುಂತಾದುವುಗಳ ಗುಲಾಮನಾಗಿ, ಶ್ರೇಷ್ಠ ಜನ್ಮವೆತ್ತಿದ್ದರೂ ನೀಚಜನರ ಸಹವಾಸಮಾಡಿ, ಸ್ತ್ರೀಯರು ಮತ್ತು ಮಕ್ಕಳು, ಐಶ್ವರ್ಯಕ್ಕಾಗಿ ಅಲೆಯುತ್ತಿರುವ ನನ್ನನ್ನು ನೀನಲ್ಲದೆ ಯಾರು ಕಾಪಾಡುತ್ತಾರೆ' ಎಂದು ಈ ಚರಣಗಳಲ್ಲಿ ಹೇಳಿಕೊಂಡಿದ್ದಾರೆ. ಇತರರು ಹೀಗಾಗಬಾರದು ಎಂದು ಎಚ್ಚರಿಸಿ ದಾರಿ ಬಿಟ್ಟವರನ್ನು ಕುರಿತು ವ್ಯಥೆ ಪಟ್ಟಿದ್ದಾರೆ. ಇದು ಪುರಂದರದಾಸರ 'ಬಿನ್ನಹಕೆ ಬಾಯಿಲ್ಲವಯ್ಯ' ಎಂಬ ಕೃತಿಯಂತಿದೆ.

ಹೀಗೆ ಭಕ್ತನು ಪಶ್ಚಾತ್ತಾಪಪಟ್ಟು ಹೃದಯವನ್ನು ಪರಿಶುದ್ಧಮಾಡಿಕೊಂಡು ಶುದ್ಧನಾದ ನಂತರ ಭಗವಂತನಿಗೆ ಅವನಲ್ಲಿ ಕರುಣೆ ಉಂಟಾಗಿ ದರ್ಶನವೀಯುತ್ತಾನೆ. 'ಕನಕನ ರುಚಿರಾ' ಎಂಬ ವರಾಳಿರಾಗದ ನಾಲ್ಕನೆಯ ಕೃತಿಯಲ್ಲಿ ತ್ಯಾಗರಾಜರಿಗೆ ಶ್ರೀರಾಮಚಂದ್ರನ ದಿವ್ಯದರ್ಶನವು ಲಭ್ಯವಾಗಿ ಅವರಿಗೆ ಉಂಟಾದ ಮಹದಾನಂದದ ಚಿತ್ರವು ತುಂಬಿದೆ. ಈ ಕೃತಿಯು ಶುದ್ಧ ಭಕ್ತಿ ಭಾವದಿಂದ ತುಂಬಿದೆ. ಆಂಜನೇಯನು ಸೀತೆಗೆ ಅಂಗುಳೀಯವಿತ್ತು ಶ್ರೀರಾಮನ ಗುಣವನ್ನು ವರ್ಣಿಸಿದಾಗ ಸೀತಾದೇವಿಗೆ ಉಂಟಾದ ಆನಂದವನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಕೃತಿಯನ್ನು ರಚಿಸಿದ್ದಾರೆ ಎನ್ನಬಹುದು. ಇದರಲ್ಲಿ ನಾರದ, ಪರಾಶರ, ಶುಕ, ಶೌನಕ, ಇಂದ್ರ, ಪಾರ್ವತಿ, ಸೀತೆ ಮುಂತಾದವರನ್ನು ಸ್ಮರಿಸಿದ್ದಾರೆ, ಇದು ಆನಂದದ ಹಾಡು. (Song of elation)

ಹೀಗೆ ಭಗವಂತನ ದರ್ಶನದಿಂದ ಅತ್ಯಂತ ಆನಂದವನ್ನು ಪಡೆದು ಪುಳಕಿತರಾದ ತ್ಯಾಗರಾಜರು ದಿವ್ಯಮಂಗಳಮೂರ್ತಿಯಾದ ಶ್ರೀರಾಮಚಂದ್ರನನ್ನು ಕೊಂಡಾಡಿದ್ದಾರೆ. ತರುವಾಯ ಅತ್ಯಂತ ನಮ್ರಭಾವದಿಂದ 5 ನೆಯ ಪಂಚರತ್ನ ಕೃತಿಯಾದ ಶ್ರೀರಾಗದ 'ಎಂದರೋ ಮಹಾನುಭಾವುಲು' ಎಂಬ ಕೃತಿಯಲ್ಲಿ ಹಿಂದೆ ಭಗವಂತನ ದಿವ್ಯದರ್ಶನ ಪಡೆದ ಚಂದ್ರ, ಸೂರ್ಯ, ಸನಕ, ಸನಂದನ, ದಿಕ್ಪಾಲಕರು, ದೇವತೆಗಳು, ಕಿಂಪುರುಷರು, ಪ್ರಹ್ಲಾದ, ನಾರದ, ತುಂಬುರ, ಅಂಜನೇಯ, ಶಿವ, ಶುಕ, ಬ್ರಹ್ಮ, ಮತ್ತು ಮಹಾ ಬ್ರಾಹ್ಮಣರೇ ಮೊದಲಾದ ಸಮಸ್ತ ವಿಭೂತಿ ಪುರುಷರಿಗೆ ತಮ್ಮ ವಂದನೆಗಳನ್ನು ಸಲ್ಲಿಸಿದ್ದಾರೆ ಈ ಕೃತಿಗೆ ಸಂಬಂಧಿಸಿದಂತೆ ಒಂದು ಘಟನೆಯನ್ನು ಇಲ್ಲಿ ಪ್ರಸ್ತಾಪಿಸಬಹುದು, ಒಂದು ಸಲ ಪಟ್ನಮ್ ಗೋವಿಂದ ಮಾರಾರ್ (1798–1843) ಎಂಬ ಖ್ಯಾತ ಸಂಗೀತ ವಿದ್ವಾಂಸರು ಕಾಶಿಗೆ ಯಾತ್ರೆ ಹೊರಟು 1842 ರಲ್ಲಿ ತ್ಯಾಗರಾಜರ ಸಂದರ್ಶನ ಮಾಡಲು ತಿರುವೈಯ್ಯಾರಿಗೆ ಬಂದರು. ಅವರು ರವೆಜಾತಿ ಶಾರೀರವಿದ್ದ ಪ್ರಸಿದ್ಧ ಸಂಗೀತ ವಿದ್ವಾಂಸರಾಗಿದ್ದು, ಆರುಕಾಲಗಳಲ್ಲಿ ಪಲ್ಲವಿಗಳನ್ನು ಹಾಡುವುದಕ್ಕೆ ಖ್ಯಾತರಾಗಿದ್ದರು. ಅವರು ಏಳು ತಂತಿಗಳಿರುವ ತಂಬೂರಿಯನ್ನು ಬಳಸುತ್ತಿದ್ದರು ಅವರು ತಿರುವೈಯ್ಯಾರಿಗೆ ಬಂದ ದಿನ ಏಕಾದಶಿಯಾದ್ದರಿಂದ ಅಂದು ರಾತ್ರಿ ತ್ಯಾಗರಾಜರ ಮನೆಯಲ್ಲಿ ಭಜನೆಯಾಗುತ್ತಿತ್ತು. ಮಾರಾರರು ಅಲ್ಲಿಗೆ ಹೋಗಿ ಭಕ್ತರ ಮಧ್ಯೆ ಕುಳಿತರು. ಭಜನೆಯ ಪೂರ್ವಭಾಗವಾದನಂತರ ಪದ್ಧತಿಯಂತೆ ಅತಿಥಿಯಾದ ಮಾರಾರರು ಹಾಡಬೇಕಾಯಿತು. ಆಗ ತಂಬೂರಿಯನ್ನು ಶ್ರುತಿಮಾಡಿ 'ಚಂದನಚರ್ಚಿತ' ಎಂದು ಆರಂಭವಾಗುವ 4ನೆಯ ಅಷ್ಟಪದಿಯನ್ನು ಪಂತುವರಾಳಿರಾಗದಲ್ಲಿ ಹಾಡಲು ತೊಡಗಿದರು. ಮೊದಲು ಅತಿ ಅತಿ ವಿಳಂಬದಲ್ಲೂ, ನಂತರ ಅತಿ ವಿಳಂಬಿತ, ವಿಳಂಬಿತದಲ್ಲೂ, ಮಧ್ಯಮಕಾಲ, ದ್ರುತ ಮತ್ತು ಅತಿದ್ರುತದಲ್ಲೂ ಕ್ರಮವಾಗಿ ಹಾಡಿ ಎಲ್ಲರನ್ನೂ ಅಚ್ಚರಿಗೊಳಿಸಿದರು. ಅವರ ಲಯ ಸಂಪತ್ತಿಗೆ ಚಕಿತರಾದ ತ್ಯಾಗರಾಜರು ಆಗ ಅವರಿಗೆ ವಂದನೆಯನ್ನು ಸಲ್ಲಿಸಲು ಹಿಂದೆಯೇ ರಚಿಸಲಾಗಿದ್ದ 'ಎಂದರೋ ಮಹಾನುಭಾವುಲು' ಎಂಬ ಕೃತಿಯನ್ನು ಹಾಡಿದರು. ಈ ಕೃತಿಯು ವಿನಮ್ರಭಾವದ ಕೃತಿ (Song of Humility) ಈ ಕೃತಿಯು ಶ್ರೀರಾಗದಲ್ಲಿರುವುದು ಸೂಕ್ತವಾಗಿದೆ, ಈ ರಾಗವು ಸಾಮಗಾನದ ಮೇಳದ ಸ್ವರಗಳನ್ನೇ ಹೊಂದಿರುವುದಲ್ಲದೆ ಸಾಮಗಾನ ಲೋಲ ಎಂದು ಹೇಳಿರುವುದು ಗಮನಾರ್ಹವಾಗಿದೆ. 5 ನೆಯ ಚರಣವು ಪಿಪೀಲಿಕ ಅಥವಾ ಸಮಯತಿಯನ್ನು ಸೂಚಿಸುತ್ತದೆ, ಕೊನೆಯ ಚರಣವು ಫಲಶ್ರುತಿಯ ತತ್ತ್ವಾರ್ಥವನ್ನು ಹೇಳುತ್ತದೆ.

ತ್ಯಾಗರಾಜರ ಈ ಪಂಚರತ್ನ ಕೃತಿಗಳು ಸಾಹಿತ್ಯದ ದೃಷ್ಟಿಯಿಂದ ಭಕ್ತಿಯೋಗ ಸಾಧನೆಯ ಐದು ಹಂತಗಳನ್ನು ಸೂಚಿಸುವ ನಿಘಂಟು ಎನ್ನಬಹುದು, ನಾದೋಪಾಸನೆ ಮತ್ತು ರಾಮಭಕ್ತಿ ಇವು ತ್ಯಾಗರಾಜರ ಸಂಗೀತದ ಮುಖ್ಯ ತಿರುಳು. ಈ ಪಂಚರತ್ನ ಕೃತಿಗಳು ನಿಜಕ್ಕೂ ರತ್ನಗಳಾಗಿವೆ. ಭಕ್ತನ ಹೃದಯದ ಪರಿವರ್ತನೆಗಳನ್ನು ಸೂಚಿಸುವ ದಿಕ್ಸೂಚಿಗಳು, ಇಂತಹ ಪಂಚರತ್ನಗಳ ಒಂದು ಹಾರವನ್ನು ಪರಮಾತ್ಮನಿಗರ್ಪಿಸಿ ಅವನ ಕೃಪೆಯನ್ನು ಪಡೆದು, ಅವನಲ್ಲಿ ಐಕ್ಯರಾದ ತ್ಯಾಗರಾಜರನ್ನು ಹೇಗೆ ಕೊಂಡಾಡುವುದು ? ಈ ಕೃತಿಗಳ ಅರ್ಥವನ್ನು ತಿಳಿದು, ಭಕ್ತಿಯುತವಾಗಿ, ಶ್ರುತಿಯುತವಾಗಿ, ಸುಸ್ವರಯುತವಾಗಿ ಹಾಡಿ ಒಂದು ಕಡೆ ತ್ಯಾಗರಾಜರನ್ನೂ, ಇನ್ನೊಂದುಕಡೆ ಪರಮಾತ್ಮನನ್ನೂ ಸ್ತುತಿಸುವುದೇ ನಮಗೆ ಇರುವ ಮಾರ್ಗ, ಭಕ್ತಿಯೋಗದಲ್ಲಿ ಎಡರು ತೊಡರುಗಳಿವೆ. ಅವೆಲ್ಲವನ್ನೂ ಅಧೀರರಾಗದೆ ಜಯಿಸಿ ಮುಂದುವರಿದರೆ ಸಾಕ್ಷಾತ್ಕಾರವು ಆಗಲೇಬೇಕೆಂದು ತಿಳಿಸುವ ಈ ಪಂಚರತ್ನಗಳು ಭಕ್ತರಿಗೆ ಅಮೃತವೇ ಸರಿ.

———

# ಸೌಲಭ್ಯವೊ - ಪರತ್ವವೊ

ಪರತ್ವವೆಂದರೆ ಹಿರಿಮೆ; ಸೌಲಭ್ಯವೆಂದರೆ ಸುಲಭವಾಗಿರುವಿಕೆ ಎಂದರ್ಥ. ಲೌಕಿಕ ಜನರಲ್ಲಿ ಇತರ ಸದ್ಗುಣಗಳಂತೆ ಈ ಎರಡು ಗುಣಗಳು ಸಹ ಸ್ವಲ್ಪಮಟ್ಟಿಗೆ ಅಲ್ಲಲ್ಲೇ ಕಂಡು ಬರುತ್ತವೆ ಆದರೆ, ಒಂದೇ ವ್ಯಕ್ತಿಯಲ್ಲಿ ಈ ಎರಡೂ ಗುಣಗಳನ್ನು ಕಾಣುವುದು ಕಷ್ಟ. ರೂಪ, ಕುಲ, ವಿದ್ಯೆ, ಧನ, ಅಧಿಕಾರ ಮುಂತಾದುವುಗಳಿಂದ ಹಿರಿಯರಾಗಿರತಕ್ಕವರು ಸಿಗುವರು. ಆದರೆ, ಸಾಧಾರಣವಾಗಿ ಅವರೆಲ್ಲರೂ ಬಹಳ ಗರ್ವಿಗಳಾಗಿರುವುದರಿಂದ ನಮ್ಮಂತಹ ಸಾಮಾನ್ಯಜನರು ಅವರ ಬಳಿಗೆ ಹೋಗಲು ಸಾಧ್ಯವಿರದು; ಇನ್ನು ಅವರಿಂದ ಉಪಕಾರ ಪಡೆಯುವ ವಿಚಾರವೆಲ್ಲಿಯದು? ಮತ್ತೆ ಕೆಲವರು ಸುಲಭರಾಗಿದ್ದರೂ, ಅವರಲ್ಲಿ ಯಾವ ಹಿರಿಮೆಯೂ ಇಲ್ಲದಿರುವುದರಿಂದ ಅವರಿಂದ ನಮಗಾವ ಉಪಕಾರವೂ ಉಂಟಾಗದು. ಇನ್ನು ಒಂದೇ ವ್ಯಕ್ತಿಯಲ್ಲಿ ಇವೆರಡು ಗುಣಗಳೂ ಕಲೆತಿರುವುದು ಬಹಳ ಅಪರೂಪ.

ಆದರೆ ದೇವರಲ್ಲಿ ಈ ಎರಡು ಗುಣಗಳೂ ಪರಿಪೂರ್ಣವಾಗಿ ತುಂಬಿರುವುವು ಅವನಲ್ಲಿ ಎಷ್ಟು ಹಿರಿಮೆಯಿರುವುದೋ ಅಷ್ಟು ಸೌಲಭ್ಯವೂ ಇರುತ್ತದೆ; ಅಥವಾ ಎಷ್ಟು ಸೌಲಭ್ಯವಿರುವುದೋ ಅಷ್ಟು ಹಿರಿಮೆಯಿರುತ್ತದೆ. ಅವನ ಒಂದೊಂದು ಗುಣಕ್ಕೂ ಎಲ್ಲೆಯಿಲ್ಲವೆಂದು ಶಾಸ್ತ್ರಗಳು ಮೊರೆಯಿಡುವುದರಿಂದ, ಪ್ರಕೃತ ಗುಣಗಳೂ ಹಾಗೆಯೇ ಎಲ್ಲೆಯಿಲ್ಲದವೆಂದು ತಿಳಿಯಬಹುದು. ಈ ಅರ್ಥವನ್ನು 'ನಾರಾಯಣ' ಎಂಬ ಅವನ ದಿವ್ಯನಾಮದಿಂದಲೇ ನಾವು ತಿಳಿಯಬಹುದು ನಾರವೆಂದರೆ ಸಮಸ್ತ ಚೇತನ ಮತ್ತು ಅಚೇತನ ಪದಾರ್ಥಗಳು; ಅಯನವೆಂದರೆ ಆಶ್ರಯ ( ಆಧಾರ ) ಎಂದರ್ಥ. ನಾರಾಯಣ ಎಂಬುದಕ್ಕೆ ಸಕಲ ಚೇತನಾಚೇತನಗಳಿಗೂ ಆಧಾರವಾಗಿರತಕ್ಕವನು ಎಂದೂ, ಆ ವಸ್ತುಗಳನ್ನು ತನಗೆ ಆಧಾರವಾಗಿ ಹೊಂದಿರುವವನು ( ಎಂದರೆ ಅಂತರ್ಯಾಮಿಯಾಗಿ ಆ ಎಲ್ಲಾ ವಸ್ತುಗಳಲ್ಲೂ ಇರತಕ್ಕವನು ) ಎಂದೂ ಎರಡು ಬಗೆಯ ಅರ್ಥವು ದೊರೆಯುತ್ತದೆ. ಎಲ್ಲಾ ಪದಾರ್ಥಗಳಿಗೂ ಆಧಾರವೆಂದು ಹೇಳಿದುದರಿಂದ ಪರಮಾತ್ಮನ ಹಿರಿಮೆಯು ತೋರಿಬರುತ್ತದೆ. ಹೇಯ (ಅಶುದ್ಧ) ಎಂದು ನಾವೇ ತೆಗಳುವ ಅಚೇತನ ವಸ್ತುಗಳಲ್ಲೂ, ಸ್ವತಃ ಪರಿಶುದ್ಧನಾಗಿದ್ದರೂ ಅಚೇತನದ ಸಂಬಂಧದಿಂದ ತಾನೂ ಅಶುದ್ಧನಾಗುವ ಜೀವನಲ್ಲೂ ಸಹ ಪರಮಾತ್ಮನು ಅಂತರ್ಯಾಮಿಯಾಗಿ ಪ್ರವೇಶಿಸಿರುತ್ತಾನೆಂದೂ, ಅದರಿಂದ ಆತನಿಗೆ ಸ್ವಲ್ಪವೂ ಜಿಗುಪ್ಸೆ ( ಅಸಹ್ಯ ) ಆಗುವುದಿಲ್ಲವೆಂದೂ ಹೇಳಿದರೆ, ಇದಕ್ಕೆ ಕಾರಣ; ಆ ವಸ್ತುಗಳಲ್ಲಿ ಆತನಿಗಿರುವ ಪ್ರೀತಿಯೇ ಸರಿ. ಇದರಿಂದ ಆತನ ಸೌಲಭ್ಯವು ತಿಳಿಸಲ್ಪಡುವುದು. ಹಾಗಾಗಿ ಈ ಎರಡೂ ಆತನ ಸಹಜವಾದ ಗುಣಗಳೆಂಬುದು ತಿಳಿಯುತ್ತದೆ.

ಪರಕಾಲನ್ ಎನಿಸಿದ ತಿರುಮಂಗೈಯಾಳ್ವಾರರು ತಮ್ಮ ದಿವ್ಯಸೂಕ್ತಿ ( ಪೆರಿಯತಿರುಮೊಳಿ ) ಎಂಬ ಗ್ರಂಥದ ಒಂದು ದಶಕದಲ್ಲಿ ( 10–6 ) ಪರಮಾತ್ಮನ ಈ ಎರಡು ಗುಣಗಳನ್ನು ಸೇರಿಸಿ ವರ್ಣಿಸಿದ್ದಾರೆ ಅಲ್ಲಿ ಮೊದಲು ಪರತ್ವವನ್ನು ವಿಸ್ತಾರವಾಗಿ ಬಣ್ಣಿಸಿ ಆಮೇಲೆ ಸೌಲಭ್ಯವನ್ನು ತಿಳಿಸಲು, ಶ್ರೀಕೃಷ್ಣಾವತಾರದ ಚರಿತ್ರವಾದ ನವನೀತಚೌರ್ಯದಾಮಬಂಧನವೆಂಬ ವೃತ್ತಾಂತವನ್ನು ಹತ್ತು ಪದ್ಯಗಳಲ್ಲಿ ಹಾಡಿದ್ದಾರೆ ಹಸ್ತನಯನ್ಯಾಯದಲ್ಲಿ ತಿಳಿಸಿದಂತೆ ಸೌಲಭ್ಯವನ್ನು ಹೊಗಳುವುದೇ ಅಲ್ಲಿ ಆಳ್ವಾರರ ಉದ್ದೇಶವಾಗಿತ್ತು. ಆ

ಶ್ರೀ ತಿ. ಅ. ಸಂಪತ್
ಕುಮಾರಾಚಾರ್ಯ ಎಂ.ಎ.

ಗುಣಕ್ಕೆ ಮೆರುಗನ್ನು ಕೊಡಲೆಂದೇ ಪರತ್ವವನ್ನೂ ತಿಳಿಸಿದರು. ಅದಾದ ಮೇಲೆ ಅದೇ ಗುಣಗಳನ್ನು ಮತ್ತೊಂದು ಬಗೆಯಲ್ಲಿ ಎಂದರೆ ಮೊದಲು ಸೌಲಭ್ಯವನ್ನೂ ಅನಂತರ ಪರತ್ವವನ್ನು ಹಾಡಬೇಕೆಂಬ ಇಚ್ಛೆಯಿಂದ ಇನ್ನೊಂದು ದಶಕವನ್ನು ಹಾಡಿದ್ದಾರೆ. ( 11–5 )

ಆ ದಶಕಕ್ಕೂ ಈ ದಶಕಕ್ಕೂ ಕೆಲವು ವ್ಯತ್ಯಾಸಗಳುಂಟು. ಈ ದಶಕವು ಇಬ್ಬರು ಸಖಿಯರ ಸಂವಾದ ರೂಪವಾಗಿ ರಚಿಸಲ್ಪಟ್ಟಿರುತ್ತದೆ. ಒಬ್ಬಳು ಅವತಾರ ಚೇಷ್ಟಿತಗಳಲ್ಲಿ ಅಲ್ಲಲ್ಲೇ ಕಂಡು ಬರುವ ಸೌಲಭ್ಯವನ್ನು ಇದರಿಂದ ಅವನನ್ನು ಹಾಸ್ಯಮಾಡುವ ಅಥವಾ ಅಲ್ಲಗಳೆಯುವ ಧೋರಣೆಯಲ್ಲಿ ವಿವರಿಸುತ್ತಾಳೆ. ಇದಕ್ಕೆ ಸಮಾಧಾನ ಹೇಳುವಂತೆ ಇನ್ನೊಬ್ಬ ಸಖಿಯು ಇದಕ್ಕೆ ಅದೇ ಪ್ರಕರಣದಲ್ಲಿ ಅಥವಾ ಬೇರೊಂದೆಡೆಯಲ್ಲಿ ಎದ್ದು ಕಾಣುವ ಪರತ್ವವನ್ನು ಬಣ್ಣಿಸುವಳು. ನಿಜವಾಗಿ ಹೇಳುವುದಾದರೆ ಆಳ್ವಾರರಿಗೆ ದೇವರನ್ನು ಹಾಸ್ಯಮಾಡುವ ಅಥವಾ ಅಲ್ಲಗಳೆಯುವ ಉದ್ದೇಶ್ಯವು ಕನಸಿನಲ್ಲೂ ಇರುವುದಿಲ್ಲ; ಅವರ ಬಾಯಿಂದ ಸ್ಪಷ್ಟವಾದ ಹಾಸ್ಯ ಅಥವಾ ತಿರಸ್ಕಾರದ ಮಾತುಗಳೂ ಹೊರಟಿರುವುದಿಲ್ಲ ಆದರೂ ಮೇಲೆ ಹೇಳಲ್ಪಡುವ ಮಹತ್ವವನ್ನು ಚೆನ್ನಾಗಿ ಎತ್ತಿತೋರಲೆಂದು ಅದಕ್ಕೆ ಪೂರ್ವಾಂಗವಾಗಿ ಹಾಸ್ಯವೆಂದು ಹೇಳಬಹುದಾದ ಧೋರಣೆಯಲ್ಲಿ ಸೌಲಭ್ಯವು ವರ್ಣಿಸಲ್ಪಟ್ಟಿರುತ್ತದೆ. ಪ್ರಕೃತ ಈ ದಶಕದ ಅರ್ಥವನ್ನು ನಾವೂ ಸಂವಾದರೂಪವಾಗಿಯೇ ತಿಳಿಸುವೆವು. ಸೌಕರ್ಯಕ್ಕಾಗಿ ಸೌಲಭ್ಯವನ್ನು ತಿಳಿಸುವ ಸಖಿಯನ್ನು ಸುಲಭಾ- ಎಂದೂ, ಪರತ್ವವನ್ನು ಹೊಗಳುವವಳನ್ನು ಪರಾ ಎಂದೂ ಕರೆಯುವ

ಸುಲಭಾ – ಸಖಿ ! ಶ್ರೀರಾಮಚಂದ್ರನನ್ನು ಸರ್ವೇಶ್ವರನೆಂದೂ ಪರಾತ್ಪರನೆಂದೂ ಕೆಲವರು ಕೊಂಡಾಡುವುದು ಕೇವಲ ಅಭಿಮಾನದಿಂದಲ್ಲವೆ, ವಸ್ತುಸ್ಥಿತಿಯು ಹಾಗಿಲ್ಲ. ಮಧ್ಯಸ್ಥದೃಷ್ಟಿಯಿಂದ ನೋಡಿದರೆ ಆತನು ಅಸಮರ್ಥ ಮತ್ತು ಬಹು ಸಾಧಾರಣ ಮನುಷ್ಯಮಾತ್ರನೆಂದೇ ತಿಳಿಯುತ್ತದೆ. ನೋಡಮ್ಮ ! ಆತನು ಅತ್ಯಂತ ಸುಕುಮಾರಿಯೂ ಹರಿಣಾಕ್ಷಿಯೂ ಆದ ತನ್ನ ಪ್ರಿಯಪತ್ನಿ ಸೀತಾದೇವಿಯೊಡನೆ ಕಲ್ಲುಮುಳ್ಳುಗಳಿಂದ ಕೂಡಿದ ಘೋರವಾದ ಅರಣ್ಯದಲ್ಲಿ ಅಲೆಯುತ್ತಾ ಎಷ್ಟೊಂದು ಕಷ್ಟಪಟ್ಟನು ! ಪರಮಾತ್ಮನಾಗಿದ್ದರೆ ಈ ಕಷ್ಟವನ್ನು ಅವನೇಕೆ ಅನುಭವಿಸಬೇಕಾಗಿತ್ತು ?

ಪರಾ – ಗೆಳತಿ ! ರಾವಣವಧೆಯಾದ ಮೇಲೆ ಸಮಸ್ತ ದೇವತೆಗಳೂ ಲಂಕಾನಗರಿಗೆ ಬಂದು ಕಾಡಿನಲ್ಲಿ ಕಲ್ಲು ಮುಳ್ಳುಗಳನ್ನು ತುಳಿದು ತಿರುಗಾಡುತ್ತಿದ್ದ ಆ ಶ್ರೀರಾಮಚಂದ್ರನ ಪಾದಾರವಿಂದಗಳಲ್ಲಿ ತಲೆಬಾಗಿ ನಮಸ್ಕಾರಮಾಡಿ ಸ್ತುತಿಸಿದ ವೃತ್ತಾಂತವನ್ನು ನೀನು ಕೇಳಲಿಲ್ಲವೆ ? ಅದುದರಿಂದ ಸರ್ವಶಕ್ತನಾದ ಪರಮಾತ್ಮನು ಸಾಧುಪರಿತ್ರಾಣ, ದುಷ್ಟವಿನಾಶನ ಮುಂತಾದುವನ್ನು ನಡೆಸಲೆಂದೂ, ತನ್ನ ಭಕ್ತಜನವಾತ್ಸಲ್ಯ, ಸೌಶೀಲ್ಯ, ಸೌಲಭ್ಯ, ಮುಂತಾದ ಗುಣಗಳನ್ನು ಪ್ರಕಾಶಪಡಿಸಲೆಂದೂ ಭೂಲೋಕದಲ್ಲಿ ಶ್ರೀರಾಮಚಂದ್ರಮೂರ್ತಿಯಾಗಿ ಅವತರಿಸಿ ಈ ಬಗೆಯ ಲೀಲೆಗಳನ್ನೆಲ್ಲಾ ನಡೆಸಿದನೆಂದು ತಿಳಿ.

ಸುಲಭಾ – ಕೃಷ್ಣಾವತಾರದಲ್ಲಿ ಅವನು ಹುಟ್ಟಿದುದು ಕಂಸನ ಸೆರೆಮನೆಯಲ್ಲಿ. ಅವನು ಹುಟ್ಟಿದ ಕೂಡಲೆ ತಂದೆ ವಸುದೇವನ ಕೈಕಾಲುಗಳಿಗೆ ಕಟ್ಟಿದ್ದ ಸಂಕೋಲೆಯೆಲ್ಲಾ ಕಳಚಿಕೊಂಡ

ವೆಂದು ಹೇಳುತ್ತಾರೆ. ಹಾಗಾದ ಪಕ್ಷದಲ್ಲಿ ಅವನೇಕೆ ಹುಟ್ಟಿದ ಕ್ಷಣವೇ ಕಂಸನಿಗೆ ಹೆದರಿಕೊಂಡು ಆ ಸ್ಥಳವನ್ನೇ ಬಿಟ್ಟು ಓಡಿಹೋಗಿ ತಲೆಮರಿಸಿಕೊಂಡು ನಂದಗೋಕುಲವನ್ನು ಸೇರಿ ನಂದಾತ್ಮಜನಾಗಿ ಬಾಳಬೇಕಾಗಿತ್ತು ?

ಪರಾ – ಗೆಳತಿ! ನೀನು ತಿಳಿದುಕೊಂಡದ್ದು ಇಷ್ಟೇಯೆ ? ಕೇಳು. ತಂದೆತಾಯಿಗಳ ಪ್ರಾರ್ಥನೆಯನ್ನಂಗೀಕರಿಸಿ, ಅವರ ಭಯವನ್ನು ದೂರ ಮಾಡಲೆಂದೇ ಅವನು ಮಧುರೆಯನ್ನು ಬಿಟ್ಟು ಗೋಕುಲಕ್ಕೆ ಬಂದನಲ್ಲದೆ ರಾಜಭಯದಿಂದಲ್ಲ. ಬಾಲ್ಯದಿಂದಲೇ ಪೂತನೆ ಶಕಟ ಮುಂತಾದ ಎಷ್ಟೋ ಮಂದಿ ಅಸುರರನ್ನು ಅನಾಯಾಸವಾಗಿ ಕೊಂದುಕೆಡಹಿದ, ಸಾಕ್ಷಾತ್ ಚತುರ್ಮುಖ ಬ್ರಹ್ಮನಿಗೂ ಜನಕನಾದ ಆ ಶ್ರೀಕೃಷ್ಣನಿಗೆ ಕಂಸನಿಂದ ಭಯವುಂಟಾಗಬಲ್ಲುದೆ ? ಆದುದರಿಂದ ತನ್ನ ಸೌಲಭ್ಯಸೌಶೀಲ್ಯಾದಿ ಶುಭ ಗುಣಗಳನ್ನು ಪೂರ್ಣವಾಗಿ ಪ್ರಕಾಶಪಡಿಸಲೆಂದೇ ಗೋಕುಲಕ್ಕೆ ಬಂದನೆಂದು ತಿಳಿ. ಮಧುರೆಯಲ್ಲೇ ಇದ್ದಿದ್ದರೆ ಈ ಗುಣಗಳು ಇಷ್ಟೊಂದು ಪ್ರಕಾಶಿಸುತ್ತಲಿರಲಿಲ್ಲ.

ಸುಲಭಾ – ಸಖಿ ! ಇದೂ ಸರಿಯೆಂದೇ ಇಟ್ಟುಕೊಳ್ಳುವ. ಆದರೆ ಇಗೋ ನೋಡು ! ಗೋಕುಲದಲ್ಲಿ ಆತನು ಗೋಪಿಯರು ಶೇಖರಿಸಿಟ್ಟಿದ್ದ ಮೊಸರನ್ನೆಲ್ಲಾ ಕುಡಿದು ಎಲ್ಲಾ ಜನರ ಹಾಸ್ಯಕ್ಕೂ ಗುರಿಯಾದನಲ್ಲ ! ಇದೂ ದೊಡ್ಡಸ್ತಿಕೆಯೆ ?

ಪರಾ – ಗೆಳತಿ ! ಏಕಲ್ಲ ? ಆತನು ಮೊಸರನ್ನು ಕುಡಿದುದಕ್ಕೆ ಕಾರಣವನ್ನು ಯೋಚಿಸಬೇಕು. ಅವನ ಮನೆಯಲ್ಲಿ ಹಾಲು ಮೊಸರುಗಳಿಗೆ ದರಿದ್ರವೆ ? ಏನೂ ಇಲ್ಲ. ಆದರೂ ಅಲ್ಲಿದ್ದ ಗೋಪಿಯರೆಲ್ಲರೂ ಆತನ ವಿಷಯದಲ್ಲಿ ಎಲ್ಲಿಲ್ಲದ ಪ್ರೀತಿಯನ್ನಿಟ್ಟು ಯಾವಾಗಲೂ ಅವನ ದಿವ್ಯ ನಾಮಗಳನ್ನೇ ಹಾಡುತ್ತಾ ಹಾಲು ಕರೆಯುವುದು ಕಾಯಿಸುವುದು, ಕಡೆಯುವುದು, ಮಾರುವುದು ಮುಂತಾದುವನ್ನು ಮಾಡುತ್ತಿದ್ದುದರಿಂದ ಅಂತಹ ಪರಮಭಕ್ತರ ಕರಕಮಲ ಸ್ಪರ್ಶದಿಂದ ಸುವಾಸಿತವಾದ ಆ ಮೊಸರು ಮುಂತಾದ ದ್ರವ್ಯಗಳಲ್ಲಿ ಆಸೆಯಿಂದಲೇ ಆತನು ಅವನ್ನೆಲ್ಲಾ ತಿಂದನು. ಇದರಿಂದ ಅವನ ಭಕ್ತಜನವಾತ್ಸಲ್ಯವೆಂಬ ಮಹಾ ಗುಣವು ಎದ್ದು ತೋರುವುದು. ಇನ್ನು ಅವನು ಎಂತಹ ಮಹಾಮಹಿಮನೆಂದರೆ, ಪ್ರಳಯಕಾಲದಲ್ಲಿ ಎಲ್ಲಾ ಲೋಕಗಳನ್ನು ನುಂಗಿದರೂ ಹೊಟ್ಟೆ ತುಂಬದವನು. ಅವನ ಹಿರಿಮೆಗೆ ಪಾರವೇ ಇಲ್ಲ.

ಸುಲಭಾ – ಸಖಿ ! ನಿನ್ನ ಮಾತು ಬಹಳ ಚಮತ್ಕಾರವಾದುದೇ ಸರಿ. ಶ್ರೀಕೃಷ್ಣನು ಮೊಸರು ಬೆಣ್ಣೆಗಳನ್ನು ಕದ್ದುತಿಂದ ಅಪರಾಧಕ್ಕಾಗಿ ತಾಯಿ ಯಶೋದೆಯಿಂದ ಹಿಡಿದು ತುಂಡುಗಳನ್ನು ಸೇರಿಸಿ ಗಂಟುಹಾಕಿದ್ದ ಹಗ್ಗದಿಂದ ಕಟ್ಟಲ್ಪಟ್ಟನಲ್ಲ, ಇದೂ ದೊಡ್ಡಸ್ತಿಕೆಯೇ ಎಂದು ಹೇಳುವಿಯಾ ?

ಪರಾ – ಧಾರಾಳವಾಗಿ ಹೇಳುವೆನು, ಕೇಳು. ತಾಯಿಯಿಂದ ಬೆಣ್ಣೆ ಕದ್ದುದಕ್ಕಾಗಿ ಕಟ್ಟಿಹಾಕಲ್ಪಟ್ಟ ದಾಮೋದರನ ಆ ಲೀಲೆಯು ದೇವತೆಗಳು ಮುನಿಗಳು ಮುಂತಾದ ದೊಡ್ಡ ದೊಡ್ಡ ಭಕ್ತರಿಗೂ ಅವಾಙ್ಮನಸಗೋಚರವಾಗಿರುವುದು ಅವರೆಲ್ಲರೂ ಆ ಲೀಲೆಯನ್ನು ನೆನೆನೆನೆದು ಅದರಿಂದ ಪ್ರಕಾಶಿತವಾಗುವ ಆತನ ಆಶ್ರಿತಪರತಂತ್ರತೆ ಮುಂತಾದ ಗುಣಗಳನ್ನೂ ಸ್ಮರಿಸಿ ಆನಂದಪರವಶರಾಗಿ ಸಂಭ್ರಮದಿಂದ ಕುಣಿದಾಡುತ್ತಾರೆ. ಕೆಲವರಂತೂ ಮನಮರುಗಿ ಮೂರ್ಛೆಯೇ ಬೀಳುತ್ತಾರೆ. ಹೀಗಿರುವಲ್ಲಿ ಈ ಚರಿತ್ರೆಯನ್ನು ನಿಂದಿಸುವವರು ಕೇವಲ ಆಸುರೀಪ್ರಕೃತಿಗಳಾದ ಅಭಾಗ್ಯಜನರಲ್ಲದೆ ಬೇರಲ್ಲ

ಸುಲಭಾ – ಈ ಮಾತೂ ಬಹಳ ಚಮತ್ಕಾರವಾದುದೇ ಇರಲಿ. ನಿನ್ನ ಕೃಷ್ಣನು ಜೀವಿಸಲು ಕುಣಿಯುವ ದೊಂಬರವನಂತೆ, ನಾಲ್ಕು ಬೀದಿಗಳು ಕೂಡುವ ಸಂಧಿಯಲ್ಲಿ ನಿಂತು ನೊಂಟದಲ್ಲಿ ಮದ್ದಳೆಯನ್ನು ಕಟ್ಟಿಕೊಂಡು ಆಡುತ್ತಾ ಹಾಡುತ್ತಾ, ಕುಣಿಯುತ್ತಿದ್ದನಲ್ಲ; ಇದಕ್ಕೇನನ್ನುವೆ ?

ಪರಾ – ಗೆಳತಿ ! ಆತನ ಈ ಚರಿತ್ರೆಯೂ ಭಕ್ತಜನರಿಗೆ ಅತ್ಯಂತ ಮನೋಹರವಾಗಿರುವುದು. ಹಿರಿಯ ಜ್ಞಾನಿಗಳೂ ಇದನ್ನು ಬಹು ಭಕ್ತಿ ಶ್ರದ್ಧೆಗಳೊಡನೆ ಧ್ಯಾನಿಸುವರು. ಗೋಪಕುಲದಲ್ಲಿ ಅವತರಿಸಿದ ಮೇಲೆ ಆತನು ಎಲ್ಲಾ ವಿಧದಲ್ಲೂ ಗೋಪರಂತೆಯೇ ಆಚರಿಸಬೇಕೆಂದೇ ಈ ಲೀಲೆಗಳನ್ನೆಲ್ಲಾ ನಡೆಸಿದನು. ಇಲ್ಲದಿದ್ದರೆ ಅಜ್ಞರಾದ ಆ ಗೋಪರು ಆತನನ್ನು ಯಾವನೋ ಮಹಾಪುರುಷನೆಂದು ತಿಳಿದು ಅವನೊಡನೆ ಪಳಗಲು ಹಿಂತೆಗೆಯುತ್ತಿದ್ದರಲ್ಲವೆ ? ಆದುದರಿಂದ ಅವರ ವಿಷಯದಲ್ಲಿ ಬಹಳ ಕನಿಕರಗೊಂಡೇ ಶ್ರೀಕೃಷ್ಣನು ಅವರ ಭಯ ಸಂಕೋಚ ಮುಂತಾದುವನ್ನು ದೂರ ಮಾಡಲೆಂದು ಹೀಗೆಲ್ಲಾ ಮಾಡಿದನು.

ಸುಲಭಾ – ಸಖಿ ! ನಿನ್ನ ಮಾತು ಒಂದಕ್ಕಿಂತ ಮತ್ತೊಂದು ಸ್ವಾರಸ್ಯವಾಗಿರುತ್ತದೆ, ಆ ಶ್ರೀಕೃಷ್ಣನು ಪಾಂಡವರ ದೂತನಾಗಿ ಕೌರವ ರಾಜಧಾನಿ ಹಸ್ತಿನಾಪುರಕ್ಕೆ ಹೋಗಿ ಅಲ್ಲಿ ಅವರೊಡನೆ ಸಂಧಿಯ ಪ್ರಸ್ತಾಪಮಾಡಿ ಆ ದುಷ್ಟ ದುರ್ಯೋಧನಾಧಿಗಳ ತಿರಸ್ಕಾರಕ್ಕೆ ಪಾತ್ರನಾದನಲ್ಲವೆ ! ಇದೂ ಹಿರಿಮೆಯೇ ಎಂದು ಹೇಳುವಿಯಾ ?

ಪರಾ – ಖಂಡಿತವಾಗಿಯೂ ಹೇಳುವೆನು. ತನ್ನನ್ನೇ ನಂಬಿದ್ದ ಪಾಂಡವರನ್ನು 'ಮಮ ಪ್ರಾಣಾ ಹಿ ಪಾಂಡವಾಃ' ಎಂದು ಹೇಳಿಕೊಂಡು ತಾನೂ ಪ್ರೀತಿಸಿ ಅವರಿಗೆ ಒಳ್ಳೆಯದನ್ನುಂಟುಮಾಡಲೆಂದಲ್ಲವೆ ಆತನು ಪಾಂಡವದೂತನಾದುದು ? ಭಕ್ತಪರಾಧೀನತೆಯು ಭಗವಂತನ ಮಹಾ ಗುಣವಲ್ಲದೆ ಎಂದಿಗೂ ದೋಷವಾಗಲಾರದು ಭಕ್ತರ ವಿಷಯದಲ್ಲಿ ಅಷ್ಟೊಂದು ಪ್ರೇಮವನ್ನಿಡದ ಭಗವಂತನನ್ನು ಕಟ್ಟಿಕೊಂಡು ನಮಗಾಗತಕ್ಕದ್ದೇನು? ಪ್ರಳಯ ಕಾಲದಲ್ಲಿ ಸಮಸ್ತ ಜಗತ್ತನ್ನೂ ನುಂಗಿ ಆಮೇಲೆ ಪುನಃ ಹೊರತಂದ ಆ ಸರ್ವೇಶ್ವರನೇ ಶ್ರೀಕೃಷ್ಣನಾಗಿ ಅವತರಿಸಿದನೆಂದ ಮೇಲೆ ಅವನ ಹಿರಿಮೆಯಲ್ಲಿ ಸಂದೇಹ ಪಡಬೇಕಾದುದೇನಿರುವುದು ?

ಸುಲಭಾ – ಭೂಮಂಡಲದಲ್ಲಿದ್ದ ಸಮಸ್ತ ರಾಜರೂ ನೋಡುತ್ತಿದ್ದಂತೆ ಅರ್ಜುನನಿಗೆ ಸಾರಥಿಯಾಗಿ ಅವನ ಕಾಲ ಬಳಿ ಕುಳಿತಿದ್ದುದಲ್ಲದೆ, ಈ ಯುದ್ಧದಲ್ಲಿ 'ನಾನು ಆಯುಧವನ್ನೆತ್ತುವುದಿಲ್ಲ' ಎಂದು ತಾನೇ ಮಾಡಿದ್ದ ಪ್ರತಿಜ್ಞೆಯನ್ನೂ ಮೀರಿ ಕೈಯಲ್ಲಿ ಚಕ್ರಾಯುಧವನ್ನೆತ್ತಿ ಭೀಷ್ಮನಿಗೆದುರಾಗಿ ಹೋದ ಆ ಶ್ರೀಕೃಷ್ಣನನ್ನು ನೀನು ಕೊಂಡಾಡುವುದು ನನಗೆ ಅರ್ಥವಾಗುತ್ತಿಲ್ಲ.

ಪರಾ – ಗೆಳತಿ ! ಕೇಳು, ಪಾಂಡವರಿಗೆ ಪಕ್ಷಪಾತಿಯಾದ ಆತನು ಅವರಿಗೆ ದೂತನಾದನೆಂದು ಹೇಳಿದ ಮೇಲೆ, ಸಾರಥಿಯಾದುದರಲ್ಲಿ ತಪ್ಪೇನು? ಭೀಷ್ಮನು 'ಈ ಯುದ್ಧದಲ್ಲಿ ಶ್ರೀಕೃಷ್ಣನು ಆಯುಧವನ್ನು ಹಿಡಿಯುವಂತೆ ನಾನು ಮಾಡುವೆನು' ಎಂದು ಪ್ರತಿಜ್ಞೆ ಮಾಡಿದ್ದುದರಿಂದ ಜ್ಞಾನಿಯೂ ಪರಮಭಕ್ತನೂ ಆದ ಆ ಮಹಾಪುರುಷನ ಮಾತನ್ನು ಸುಳ್ಳಾಗಿಸಬಾರದೆಂದೇ ಶ್ರೀಕೃಷ್ಣನು ಆಯುಧವನ್ನೆತ್ತಿದನು. ಆದರಿಂದಲೂ ಅವನ ಭಕ್ತಪ್ರೇಮವೇ ಪ್ರಕಾಶಿಸುವುದು, ಇದೂ ಅಲ್ಲದೆ ಆ ಪಾರ್ಥಸಾರಥಿಯ ಪಾದಾರವಿಂದಗಳಲ್ಲಿ ರಾಜಾಧಿರಾಜರೆಲ್ಲರೂ ತಲೆಬಾಗಿ ನಮಸ್ಕರಿಸುತ್ತಿದ್ದರೆಂಬುದನ್ನು ನೀನು ಕೇಳಲಿಲ್ಲವೆ ?

ಸುಲಭಾ – ಅಂತಿರಲಿ, ಎಲ್ಲರೂ ನೋಡಿ ನಗುವಂತೆ ಕುಳ್ಳವಾಮನವೇಷವನ್ನು ತಾಳಿ, ಮಹಾಬಲಿಯ ಯಜ್ಞಶಾಲೆಗೆ ಹೋಗಿ ಅಲ್ಲಿ ಕೇವಲ ಮೂರು ಅಡಿ ಭೂಮಿಯನ್ನು ಬೇಡುವವನು ದೊಡ್ಡವನಾಗಿರಬಲ್ಲನೆ?

ಪರಾ – ಏಕಿರಬಾರದು ? ಆಮೇಲೆ ನಡೆದ ಕಥೆಯನ್ನು ನೀನು ಕೇಳಲಿಲ್ಲವೆ ? ಮಹಾಬಲಿಯಿಂದ ದಾನವನ್ನು ಪಡೆದ ಕೂಡಲೆ ಆತನ ಬಹು ದೊಡ್ಡವನಾಗಿ ಬೆಳೆದು ಲೋಕಗಳನ್ನೆಲ್ಲಾ ತನ್ನ ಅಡಿಯಿಂದ ಅಳೆದುಕೊಂಡನು . ಹೀಗೆ ಆ ಅವತಾರವು ಒಂದೇ ಸಮಯದಲ್ಲಿ ಸೌಲಭ್ಯಪರತ್ವಗಳನ್ನು ಪ್ರಕಾಶಪಡಿಸಿತು.

ಸುಲಭಾ – ಇದೇನಮ್ಮ ಅನ್ಯಾಯ ! ಚಿಕ್ಕ ರೂಪವನ್ನು ತೋರಿ ದಾನವನ್ನು ಬೇಡಿ ಆಮೇಲೆ ದೊಡ್ಡರೂಪದಿಂದ ಭೂಮಿಯನ್ನಳೆದುಕೊಂಡ ಆ

(36ನೇ ಪುಟ ನೋಡಿ)

# ಕಿಶೋರ ಜಗತ್

# ಬ್ರಹ್ಮರ್ಷಿ ವಶಿಷ್ಠ

ರಸಿಕ ಪುತ್ತಿಗೆ

ಮಹರ್ಷಿ ವಶಿಷ್ಠನ ಹೆಸರನ್ನು ನೀವು ಕೇಳಿರಬಹುದು. ಶ್ರೀರಾಮಚಂದ್ರನ ಹೆಸರು ಕೇಳಿದವರೆಲ್ಲ ವಶಿಷ್ಠರನ್ನು ಬಲ್ಲರು. ವಶಿಷ್ಠನೆಂಬುದು ಒಂದು ಉಪಾಧಿಯೆಂದು ಹೇಳಬಹುದು. ನಮಗೆ ತಿಳಿದಿರುವಂತೆ ಇವನು ಆ ಬಿರುದಿನ ಮೊದಲನೆಯ ಋಷಿ. ಆ ಆಸನದಲ್ಲಿ ಕುಳಿತವರಿಗೆಲ್ಲಾ ವಶಿಷ್ಠನೆಂಬ ಉಪಾಧಿ ದೊರೆಯುತ್ತಿತ್ತು. ಪ್ರಾಚೀನ ಸಾಹಿತ್ಯದಲ್ಲಿ ನಮಗೆ ಹಲವಾರು ವಶಿಷ್ಠರು ದೊರೆಯುತ್ತಾರೆ. ದೇವರಾತ, ಮೈತ್ರಾ, ವರುಣ, ಅಪವ, ಶ್ರೇಷ್ಠಭಾಜ ಮುಂತಾದವರು ವಶಿಷ್ಠರು. ಇವರುಗಳೆಲ್ಲ ತಮ್ಮ ಕಾಲದ ಒಳ್ಳೆಯ ಬ್ರಹ್ಮಜ್ಞಾನಿ, ಶ್ರೇಷ್ಠ ತಪಸ್ವಿ, ವಿದ್ವಾಂಸ, ಸ್ಮೃತಿ ಧರ್ಮ ಶಾಸ್ತ್ರಗಳ ರಚಯಿತರಾಗಿದ್ದರು. ಅವರ ಎಲ್ಲಕ್ಕಿಂತ ಶ್ರೇಷ್ಠ ಗುಣವೆಂದರೆ ಅವರು ಬಹಳ ಸಹನಶೀಲರಾಗಿದ್ದರು. ಕ್ಷಮಾಗುಣ ಉಳ್ಳವರಾಗಿದ್ದರು ಅದರಿಂದ ಅವರಿಗೆ 'ಬ್ರಹ್ಮರ್ಷಿ' ಎಂಬ ಪದವಿ ದೊರೆಯುತ್ತಿತ್ತು.

ಶ್ರೀರಾಮಚಂದ್ರನ ತಂದೆಯಾದ ದಶರಥ ಮಹಾರಾಜನ ಪುರೋಹಿತನಾಗಿದ್ದವನೊಬ್ಬ ವಶಿಷ್ಠ. ಸೂರ್ಯವಂಶೀಯ ರಾಜರುಗಳ ಪುರೋಹಿತರು ವಶಿಷ್ಠರುಗಳೇ ಆಗುತ್ತಿದ್ದರು. ನೀವು ಸತ್ಯವಾದಿ ಹರಿಶ್ಚಂದ್ರನ ಕತೆ ಕೇಳಿದ್ದೀರಿ. ಆತನ ತಂದೆ ತ್ರಿಶಂಕು, ಮಗ ರೋಹಿತ – ಈ ಮೂವರ ಕಾಲದಲ್ಲಿಯೂ ವಶಿಷ್ಠರೇ ಪುರೋಹಿತರಾಗಿದ್ದರು.

ಶ್ರೀರಾಮಚಂದ್ರ ಹಾಗೂ ಅವನ ಮಕ್ಕಳ ಕಾಲದಲ್ಲಿಯೂ ವಶಿಷ್ಠರೇ ಪುರೋಹಿತರಾಗಿದ್ದರು. ಇದರಿಂದ ಇನ್ನೂ ಸ್ಪಷ್ಟವಾಗುವುದೇನೆಂದರೆ ವಶಿಷ್ಠನೆಂಬುದು ಒಂದು ಉಪಾಧಿ ಮಾತ್ರ.

ಮಹಾರಾಜ ದಶರಥನ ಪುರೋಹಿತ ವಶಿಷ್ಠ ಕೇವಲ ರಾಜಕುಮಾರರಿಗೆ ಮಾತ್ರ ಶಿಕ್ಷಣವನ್ನು ಕೊಡುತ್ತಿದ್ದು, ಯಜ್ಞ ಯಾಗಾದಿಗಳನ್ನು ಮಾಡಿಸುತ್ತಿದ್ದುದಲ್ಲದೆ ರಾಜ್ಯಕಾರ್ಯಸಂಚಾಲನೆಯ ಮಹತ್ವಪೂರ್ಣ ಪರಿಷತ್ತಿನಲ್ಲಿಯೂ ಒಬ್ಬ ಸದಸ್ಯನಾಗಿದ್ದ.

ಮಹರ್ಷಿ ವಿಶ್ವಾಮಿತ್ರನೊಡನೆ ವೈರ ವಿರುವುದರಿಂದಲೂ ಮಹರ್ಷಿ ವಶಿಷ್ಠ ಪ್ರಖ್ಯಾತನಾಗಿದ್ದ. ಅವರಿಬ್ಬರ ನಡುವೆ ಅನೇಕ ವರ್ಷ ಕಾಲ ಜಗಳ ಸಾಗಿತ್ತು. ಆದರೆ ದಶರಥನ ಕಾಲದ ವಶಿಷ್ಠರಿಗೆ ವಿಶ್ವಾಮಿತ್ರನೊಡನೆ ದ್ವೇಷವಿರಲಿಲ್ಲ.

ರಾಕ್ಷಸರ ವಿನಾಶಕ್ಕಾಗಿ ಶ್ರೀ ರಾಮಚಂದ್ರನನ್ನು ಕೇಳಲು ವಿಶ್ವಾಮಿತ್ರ ಆಯೋಧ್ಯೆಗೆ ಬಂದಾಗ ದಶರಥ ಮಹಾರಾಜ ರಾಮನನ್ನು ಕಳುಹಿಸಲು ಸಿದ್ಧನಿರಲಿಲ್ಲ. ಆಗ ವಶಿಷ್ಠನೇ ದಶರಥ ಮಹಾರಾಜನಿಗೆ ಶ್ರೀರಾಮಚಂದ್ರನನ್ನು ವಿಶ್ವಾಮಿತ್ರನ ಜೊತೆಗೆ ಕಳುಹಿಸುವಂತೆ ಸಲಹೆ ನೀಡುತ್ತಾನೆ. ಯಾಕೆಂದರೆ ವಿಶ್ವಾಮಿತ್ರ ತಪಸ್ವಿ ಮಾತ್ರವಲ್ಲದೆ ಯುದ್ಧವಿದ್ಯೆಯ ಪರಿಚಯ ಉಳ್ಳವನೂ ಹೌದು ಅವನು ರಾಮಚಂದ್ರನಿಗೆ ಶಿಕ್ಷಣವನ್ನು ಕೊಡುವುದಲ್ಲದೆ, ರಕ್ಷಣೆಯನ್ನೂ ನೀಡಬಲ್ಲ.

ಆದರ ಇದಕ್ಕಿಂತ ಬಹಳ ಹಿಂದೆ ಇದ್ದ ವಶಿಷ್ಠನಿಗೆ ವಿಶ್ವಾಮಿತ್ರನೊಡನೆ ಭಯಂಕರಯುದ್ಧ ನಡೆದಿತ್ತು. ಆ ವಶಿಷ್ಠ ಋಷಿಯ ಹೆಸರು ದೇವರಾತನೆಂದು. ಆಗ ವಿಶ್ವಾಮಿತ್ರ ಒಬ್ಬ ಪ್ರಸಿದ್ಧ ರಾಜನಾಗಿದ್ದ. ಒಮ್ಮೆ ಎಲ್ಲಿಂದಲೋ ಹಿಂತಿರುಗುತ್ತಾ ಆ ದೇವರಾತ ವಶಿಷ್ಠನ ಆಶ್ರಮಕ್ಕೆ ಬಂದ. ಆ ಮಹರ್ಷಿಯ ಬಳಿ ನಂದಿನಿ ಎಂಬ ಆಕಳಿತ್ತು. ಅದು ಕಾಮಧೇನುವಿನ ಕರುವಾಗಿತ್ತು ಕೇಳಿದುದನ್ನೆಲ್ಲ ಕೊಡುತ್ತಿತ್ತು.

ದೇವರಾತ ವಶಿಷ್ಠ ಮಹರ್ಷಿಯು ಆದರೊಡನೆ ನಾನಾ ರೀತಿಯ ಪಕ್ವಾನ್ನಗಳನ್ನು ಕೇಳಿ ವಿಶ್ವಾಮಿತ್ರ ಹಾಗೂ ಆತನ ಸೇನೆಯನ್ನು ಸರಿಯಾಗಿ ಉಪಚರಿಸಿದ. ವಿಶ್ವಾಮಿತ್ರನು ಸಂತುಷ್ಟನಾಗಿ ಮಹರ್ಷಿಯೊಡನೆ – “ಈ ಆಕಳನ್ನು ನನಗೆ ಕೊಟ್ಟು ಬಿಡಿ, ಏಕೆಂದರೆ ಇಂಥ ಆಕಳು ರಾಜನ ಹತ್ತಿರ ಇರಬೇಕು” – ಎಂದು ಕೇಳಿದ. ಆಕಳು ಇಂದ್ರನದು, ಮಹರ್ಷಿ ಹೇಗೆ ಕೊಡಲು ಸಾಧ್ಯ? ಆತ ಇಲ್ಲವೆಂದು ತಲೆ ಅಡಿಸಿದ. ವಿಶ್ವಾಮಿತ್ರ ರಾಜ ಇದನ್ನು ಕೇಳಿ ಸಿಟ್ಟುಗೊಂಡು ಬಲಪ್ರಯೋಗದಿಂದ ಆಕಳನ್ನು ಕೊಂಡೊಯ್ಯಲು ತೀರ್ಮಾನಿಸಿದ. ಆಗ ಆಕಳಿನ ಮೈಯಿಂದ ಸಹಸ್ರಾರು ಯೋಧರು ಹುಟ್ಟಿ ವಿಶ್ವಾಮಿತ್ರನ ಸೇನೆಯನ್ನು ನಾಶಪಡಿಸಿದರು.

ಇದನ್ನು ಕಂಡು ಕೆರಳಿದ ವಿಶ್ವಾಮಿತ್ರ ಹಲವು ಬಾರಿ ಆಶ್ರಮಕ್ಕೆ ಧಾಳಿ ಇಟ್ಟ. ಆದರೆ ಮಹರ್ಷಿ ದೇವರಾತ ವಶಿಷ್ಠ ಪರಮ ತಪಸ್ವಿಯಾದುದರಿಂದ ತಪಸ್ಸಿನ ಪ್ರಭಾವದಿಂದ ಪ್ರತಿಸಲವೂ ವಿಶ್ವಾಮಿತ್ರನಿಗೆ ಸೋಲಾಯಿತು. ವಿಶ್ವಾಮಿತ್ರನು ಮಹರ್ಷಿಯ ಎಲ್ಲ ಮಕ್ಕಳನ್ನೂ ಕೊಂದು ಹಾಕಿದ. ಆದರೂ ಋಷಿಗೆ ಸಿಟ್ಟು ಬರಲಿಲ್ಲ. ಆಗ ಚಕಿತನಾದ ವಿಶ್ವಾಮಿತ್ರ ರಾಜನ ಬಲಕ್ಕಿಂತ ತಪಸ್ವಿಯ ಬಲ ಹೆಚ್ಚಿನೆಂದು ತಿಳಿದು ತಾನೂ ತಪಸ್ಸು ಮಾಡಿ ಬ್ರಹ್ಮಋಷಿಯಾಗಬೇಕೆಂದೆಣಿಸಿದ.

ಆತ ಕಠೋರ ತಪಸ್ಸು ಮಾಡಿದ. ಆದರೂ ಆತನ ಸಿಟ್ಟು ಬಿಡಲಿಲ್ಲ ಎಲ್ಲ ಋಷಿಗಳೂ, ದೇವತೆಗಳೂ ಆತನೊಡನೆ ಹೇಳಿದರು – “ನಿಮ್ಮನ್ನು ವಶಿಷ್ಠರು ಬ್ರಹ್ಮ ಋಷಿ ಎಂದು ಹೇಳುವವರೆಗೆ ನೀವು ಬ್ರಹ್ಮ ಋಷಿ ಆಗಲಾರಿರಿ”

ಇದನ್ನು ಕೇಳಿದ ವಿಶ್ವಾಮಿತ್ರ ಇನ್ನಷ್ಟು ಕುಪಿತನಾದ. ಸಲಸಲವೂ ಹೊಸ ಹೊಸ ಅಸ್ತ್ರಗಳನ್ನು ಪ್ರಯೋಗಿಸಿ ವಶಿಷ್ಠನ ಮೇಲೆ ಆಕ್ರಮಣ ಮಾಡಿದ. ವಶಿಷ್ಠನ ಬ್ರಹ್ಮತೇಜದ ಇದಿರು ಇದೊಂದೂ ನಾಗಲಿಲ್ಲ.

ಒಮ್ಮೆ ಹೀಗಾಯಿತು. ರಾತ್ರಿ ಹೊತ್ತು. ವಿಶ್ವಾಮಿತ್ರ ಇಂದು ವಶಿಷ್ಠನನ್ನು ತೀರಿಸಿಬಿಡಬೇಕೆಂದು ಬಂದ. ಆತ ಕದ್ದು ಆಶ್ರಮ ಪ್ರವೇಶ ಮಾಡಿದ. ಆಗ ಮಹರ್ಷಿ ವಶಿಷ್ಠ ತಮ್ಮ ಪತ್ನಿ ಅರುಂಧತಿಯ ಜೊತೆಗೆ ಕುಳಿತಿದ್ದ. ಹೊರಗೆ ಚೆಲ್ಲಿದ ಬೆಳದಿಂಗಳನ್ನು ಕಂಡು ಹೆಂಡತಿಗೆ ಹೇಳುತ್ತಿದ್ದ, “ಇಂದು ವಿಶ್ವಾಮಿತ್ರನ ತಪಸ್ಸಿನ ಪ್ರಭಾವ ಜಗತ್ತಿಗೆಲ್ಲ ಹರಡಿದಂತೆ ಶುಭ್ರವಾದ ಬೆಳದಿಂಗಳು ಚೆಲ್ಲಿದೆ” ಇದನ್ನು ಕೇಳಿದ ವಿಶ್ವಾಮಿತ್ರ ಬೆರಗಾದ “ತಾನೆಂತಹ ದುಷ್ಟ. ರಾತ್ರಿಯ ವೇಳೆ ಕದ್ದು ಕೊಲ್ಲಲು ಬಂದಿರುವೆ. ಏಕಾಂತದಲ್ಲಿ ತಮ್ಮ ಪತ್ನಿಯೊಡನೆ ಶತ್ರುವಿನ ಪ್ರಶಂಸೆ ಮಾಡುವಷ್ಟು ಉದಾರಿ ಈತ ಎಂದು” ತನ್ನ ತಾನೇ ಹಳಿದುಕೊಂಡ.

ಒಡನೇ ತನ್ನ ಆಯುಧಗಳನ್ನು ಬಿಸಾಡಿ ವಿಶ್ವಾಮಿತ್ರ ವಶಿಷ್ಠನ ಕಾಲಿಗೆರಗಿದ. ಕಣ್ಣಿನಿಂದ ಧಾರಾಕಾರವಾಗಿ ನೀರು ಸುರಿಯುತ್ತಿತ್ತು. ಕ್ಷಣ ಕ್ಷಣವೂ ತನ್ನ ತಪ್ಪನ್ನು ಹೇಳಿಕೊಳ್ಳುತ್ತ ಕ್ಷಮೆಯಾಚಿಸುತ್ತಿದ್ದ.

ವಶಿಷ್ಠ ಆತನನ್ನು ಪ್ರೀತಿಯಿಂದ ಅಪ್ಪಿಕೊಂಡು ಹೇಳಿದ – “ಬ್ರಹ್ಮರ್ಷಿ ತಾವು ಇಂದು ಸಿಟ್ಟನ್ನು

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು ಸೋಮ, ಮಂಗಳ, ಬುಧ ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | | ಶುಕ್ರವಾರಗಳಲ್ಲಿ | |
|---|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | ಅಭಿಷೇಕ | ಪ್ರಾ 7–30 | ಪ್ರಾ 8–30 |
| | | | ಸಮರ್ಪಣ | ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | ಪ್ರಾ 10–30 | ಮ 12–00 | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ಒಡೆಯುವುದು | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಬಿಟ್ಟರು ತಾವು ಇಂದಿನಿಂದ ಬ್ರಹ್ಮರ್ಷಿ. ತಾವು ಬ್ರಹ್ಮರ್ಷಿಯಾದಿರಿ"

ಇಂತಿದೆ ವಶಿಷ್ಠನ ಕಥೆ. ಶ್ರೇಷ್ಠನಾದ ಪರಶುರಾಮನು ಕ್ಷತ್ರಿಯರ ವಂಶ ನಿರ್ಮೂಲನದ ಪಣ ತೊಟ್ಟಾಗ ಸೂರ್ಯವಂಶವನ್ನು ರಕ್ಷಿಸಿದವನು ವಶಿಷ್ಠನೇ. ಇವನ ಹಿರಿಯ ಮಗ ಶಕ್ತಿ. ಶಕ್ತಿಯ ಮಗ ಪರಾಶರ. ಇವರಿಬ್ಬರೂ ಮಹರ್ಷಿಗಳಾಗಿದ್ದರು. ಪರಾಶರನ ಪುತ್ರನ ಹೆಸರು ಜಗತ್ಪ್ರಸಿದ್ಧ. ಅವರೇ ವೇದವ್ಯಾಸರು. ಆಕಾಶದಲ್ಲಿ ಏಳು ನಕ್ಷತ್ರ ನೀವು ನೋಡಿರ ಬಹುದು. ಅವುಗಳನ್ನು 'ಸಪ್ತರ್ಷಿ ಮಂಡಲ'ವೆನ್ನುತ್ತಾರೆ. ಅದರಲ್ಲಿ ಮೊದಲನೆಯ ನಕ್ಷತ್ರದ ಹತ್ತಿರ ಚಿಕ್ಕ ನಕ್ಷತ್ರವೊಂದಿದೆ. ಅದರ ಹೆಸರು ಅರುಂಧತಿ. ಆಕೆ ಮಹರ್ಷಿ ವಶಿಷ್ಠರ ಪತ್ನಿಯೆಂದೇ ಪ್ರಖ್ಯಾತಳಲ್ಲ. ತನ್ನ ಪತಿಯನ್ನು ಪ್ರೀತಿಸುವವರಲ್ಲಿ ಆಕೆ ಶ್ರೇಷ್ಠಳು. ಆದ್ದರಿಂದಲೇ ಆಕಾಶದಲ್ಲಿ ತನ್ನ ಪತಿಯ ಜೊತೆಗೆ ಅರುಂಧತಿಗೆ ಮಾತ್ರ ಜಾಗವಿದೆ.

(ವಿವಿಧ ಮೂಲಗಳಿಂದ)

---

(34 ನೇ ಪುಟದಿಂದ)

ಕಪಟಿಯನ್ನು ಹೀಗೆಲ್ಲಾ ಮಿತಿಮೀರಿ ಹೊಗಳುತ್ತಿರುವೆ? ಅವನಿಗೆ ವಾಸಮಾಡಲು ಒಂದು ಮಹಾ ನಗರವೋ, ಕಡೆಯಪಕ್ಷ ಒಂದು ಅರಮನೆಯೋ ದೊರಕದೆ, ನೀರಿನ ಮೇಲೂ, ಶ್ರೀ ವೆಂಕಟಾಚಲವೆಂಬ ಕಲ್ಲು ಗುಡ್ಡದ ಮೇಲೂ ವಾಸಮಾಡುತ್ತಿರುವನಲ್ಲ! ಅವನೆಂತಹವನಾಗಿರಬಹುದು?

ಪರಾ – ಗೆಳತಿ! ಅವನು ನೀರಿನಮೇಲೂ (ಕ್ಷೀರ ಸಾಗರದಲ್ಲೂ) ಶ್ರೀವೇಂಕಟಾಚಲವೆಂಬ ಕಲ್ಲಿನ ಮೇಲೆ ವಾಸಮಾಡುತ್ತಿರುವಂತೆಯೇ ಪರಕಾಲಸೂರಿ (ತಿರುಮಂಗೈಯಾಳ್ವಾರ್)ಯ ಹೃದಯದಲ್ಲೂ ನಿತ್ಯವಾಸಮಾಡುತ್ತಿರುವನು. ಅವನು ಪರಾತ್ಪರನೆಂಬುದಕ್ಕೆ ಇದಕ್ಕಿಂತ ಶ್ರೇಷ್ಠವಾದ ಪ್ರಮಾಣವಿನ್ನೊಂದು ಬೇಕೆ? ಪರಕಾಲಸೂರಿಯು ಪರಮಾತ್ಮನನ್ನಲ್ಲದೆ ಮತ್ತೊಂದು ವಸ್ತುವನ್ನು, ಅದೆಷ್ಟೇ ದೊಡ್ಡ ದೇವತೆಯಾಗಿದ್ದರೂ ಮನಸಾರ ನೆನೆಯನು. ಆದುದರಿಂದ ಅವನು ಧ್ಯಾನಿಸುವ ವಸ್ತುವೇ ಪರದೇವತೆಯೆಂಬುದರಲ್ಲಿ ಯಾರೂ ಸಂದೇಹ ಪಡಕೆಲಸವಿಲ್ಲ. ಇಂತಹ ಪರಾತ್ಪರನು ದೇವತೆಗಳಿಗೆ ದರ್ಶನವನ್ನೀಯಲು ಕ್ಷೀರ ಸಾಗರದಲ್ಲೂ, ನಮ್ಮಂತಹ ಪಾಮರರಿಗೆ ದರ್ಶನ ನೀಯಲೆಂದು ಶ್ರೀವೇಂಕಟಾಚಲದಲ್ಲೂ ವಾಸ ಮಾಡುತ್ತಿರುವನು. ಆದುದರಿಂದ ನಾವು ಅವನ ಸೌಲಭ್ಯಸೌಶೀಲ್ಯಾದಿಗಳನ್ನು ತಿಳಿದುಕೊಂಡು ಸಂತೋಷಪಡಬೇಕು.

# ವಿಷ್ಣುಭಕ್ತ ಚಂದ್ರಹಾಸ

ಕೇರಳ ರಾಜ್ಯಕ್ಕೆ ಮೇಧಾವಿ ದೊರೆ. ಅವನಿಗೆ ಪಟ್ಟಮಹಿಷಿಯಲ್ಲಿ ಮೂಲಾ ನಕ್ಷತ್ರದಲ್ಲಿ ಅರಿಷ್ಟಾಂಶದಲ್ಲಿ ಪುಣ್ಯಶಾಲಿಯಾದ ಪುತ್ರನು ಜನಿಸಿದನು. ಅವನಿಗೆ ಎಡಗಾಲಿನಲ್ಲಿ ಆರು ಬೆರಳುಗಳಿದ್ದವು. ರಾಜನು ವಿಜೃಂಭಣೆಯಿಂದ ಪುತ್ರೋತ್ಸವ ಮಾಡಿದನು.

ಸ್ವಲ್ಪ ಕಾಲದಲ್ಲಿಯೇ ಶತ್ರುರಾಜರು ದಂಡೆತ್ತಿ ಬಂದು ಮೇಧಾವಿ ಯುದ್ಧದಲ್ಲಿ ಮಡಿದನು. ಆತನ ಪತ್ನಿ ಸಹಗಮನ ಮಾಡಿದಳು. ಹೀಗೆ ಮಗು ತಬ್ಬಲಿಯಾಯಿತು. ಒಬ್ಬ ದಾದಿ ಆ ಮಗುವನ್ನು ಎತ್ತಿಕೊಂಡು ಅಲೆಯುತ್ತ ಕುಂತಳಪುರಕ್ಕೆ ಬಂದಳು. ಆ ದಾದಿ ಮಗುವಿಗೆ ಅಕ್ಕರೆಯಿಂದ ಹಾಲು ಹಣ್ಣುಗಳನ್ನು ಕೊಟ್ಟು ಸಾಕುತ್ತಿದ್ದಳು. ಮಗುವಿಗೆ ಏನಾದರೂ ಕೊರತೆಯಾದರೆ ಬಹುವಾಗಿ ಕೊರಗುತ್ತಿದ್ದಳು

ಹೀಗಿರಲು ಅಕ್ಕರೆಯಿಂದ ಸಾಕುತ್ತಿದ್ದ ಆ ದಾದಿಯೂ ತೀರಿಕೊಂಡಾಗ ಮಗು ಪರಪುಟ್ಟನಾಯಿತು. ಆ ಅನಾಥ ಶಿಶುವನ್ನು ಕುಂತಳಪುರದ ಹೆಂಗಸರು ಮುದ್ದಿನಿಂದ ಸಾಕುತ್ತಿದ್ದರು. ಹೀಗೆ ಆ ಮಗುವಿಗೆ ಐದು ವರ್ಷಗಳು ತುಂಬಿತು. ಆ ಬಾಲಕನು ಮಕ್ಕಳ ಜೊತೆ ಆಟವಾಡಿ ಕಾಲ ಕಳೆಯುತ್ತಿದ್ದನು.

ಒಂದು ದಿನ ಆಡುತ್ತಿರುವಾಗ ಆ ಬಾಲಕನಿಗೆ ಗುಂಡಗಿರುವ ಸಾಲಿಗ್ರಾಮವು ಸಿಕ್ಕಿತು. ಆ ಬಾಲಕನು ಅದನ್ನು ಗೋಲಿಯೆಂದು ತಿಳಿದು ಜೋಪಾನವಾಗಿ ಅದನ್ನು ಸದಾ ಬಾಯೊಳಗೆ ಇಟ್ಟುಕೊಂಡಿರುತ್ತಿದ್ದನು. ಆ ಸಾಲಿಗ್ರಾಮದ ಪ್ರಭಾವದಿಂದ ಆ ಮಗುವಿನ ಹೃದಯದಲ್ಲಿ ಕೃಷ್ಣ ಭಕ್ತಿ ನೆಲೆಸಿತು. ಬಾಯಲ್ಲಿ ಸದಾ ಹರಿನಾಮ ಸ್ಮರಣೆ ನಡೆಯುತ್ತಿತ್ತು.

ಕುಂತಳ ನಗರದ ಮಂತ್ರಿ ದುಷ್ಟಬುದ್ಧಿಯ ಮನೆಯ ಬಳಿ ಆಡುತ್ತಿದ್ದ ತೇಜಸ್ವಿಯಾದ ಬಾಲಕನನ್ನು ಕಂಡು ಅಲ್ಲಿನ ಬ್ರಾಹ್ಮಣರು "ಅಯ್ಯಾ, ಮಂತ್ರಿ, ಸರ್ವ ಲಕ್ಷಣ ಸಂಪನ್ನನಾದ ಈ ಬಾಲಕನಲ್ಲಿ ರಾಜ ಲಕ್ಷಣಗಳಿವೆ. ಇವನು ಮುಂದೆ ಕುಂತಳಪುರದ ರಾಜನಾಗುವುದರಲ್ಲಿ ಸಂಶಯವಿಲ್ಲ. ಈ ಬಾಲಕನನ್ನು ಚೆನ್ನಾಗಿ ಕಾಪಾಡಿಕೋ" ಎಂದು ಹೇಳಿದರು.

ಇದನ್ನು ಕೇಳಿ ಆ ಮಂತ್ರಿಗೆ ಅಸೂಯೆ ಹುಟ್ಟಿತು. ಏಕೆಂದರೆ ಕುಂತಳರಾಜನಿಗೆ ಗಂಡು ಮಕ್ಕಳಿರಲಿಲ್ಲ. ಆ ಮಂತ್ರಿ ರಾಜ್ಯದಾಸೆಯಿಂದ ಆ ಮಗುವನ್ನು ಕಟುಕರಿಗೆ ಒಪ್ಪಿಸಿ, ಕಾಡಿಗೆ ತೆಗೆದುಕೊಂಡು ಹೋಗಿ ಕೊಂದುಹಾಕುವಂತೆ ಅಜ್ಞಾಪಿಸಿದನು

ಆ ಕಟುಕರು ಬಾಲಕನನ್ನು ಹೆಗಲ ಮೇಲಿಟ್ಟುಕೊಂಡು ಕಾಡಿನಲ್ಲಿ ಬರುತ್ತಿರುವಾಗ ಆ ಬಾಲಕನು ಹೆದರಿಕೆಯಿಂದ ಅಳುತ್ತಾ, ಸಾಲಿಗ್ರಾಮದ ಮಹಿಮೆಯಿಂದ ಶ್ರೀಮನ್ನಾರಾಯಣನ ಸ್ಮರಣೆ ಮಾಡುತ್ತಿದ್ದ. ಇದನ್ನು ಕಂಡು "ಈ ಚಿಕ್ಕ ಬಾಲಕನ ಬಾಯಿಯಲ್ಲಿ ತಂದೆ, ತಾಯಿ, ಬಂಧು ಬಳಗದವರ ಹೆಸರು ಬರದೆ ದೇವರನಾಮವೊಂದೇ ಕೇಳಿಬರುತ್ತಿದೆ, ಏನಾಶ್ಚರ್ಯ" ಎಂದು ತಿಳಿದ ಕಟುಕರಿಗೆ ಆ ಬಾಲಕನನ್ನು ಕಡಿದು ಹಾಕಲು ಮನಸ್ಸು ಒಪ್ಪದ ಕಾರಣ ಮಂತ್ರಿ ದುಷ್ಟಬುದ್ಧಿಯನ್ನು ನಿಂದಿಸಿ ಆ ಬಾಲಕನ ಎಡಗಾಲಿನಲ್ಲಿದ್ದ ಆರನೇ ಬೆರಳನ್ನು ಕತ್ತರಿಸಿಕೊಂಡು ಹೋಗಿ ದುಷ್ಟಬುದ್ಧಿಗೆ ತೋರಿಸಿದರು.

ಶ್ರೀ ಎನ್. ಆರ್. ಸೋಮಶೇಖರ್ ಬಿ.ಎ.

ಇತ್ತ ಬಾಲಕನು ನೋವಿನಿಂದ ಅಳುತ್ತ ಕಾಡಿನಲ್ಲಿ ಬಿದ್ದಿದ್ದನು. ನೋವಿನಿಂದ ನರಳುತ್ತಿದ್ದ ಆ ಬಾಲಕನಿಗೆ ಮೃಗ ಪಕ್ಷಿಗಳು ಉಪಚರಿಸಿದವು. ಕಾಲು ನೋವಿನಿಂದ ಅಳುತ್ತಿದ್ದ ಬಾಲಕನ ಸ್ಥಿತಿಯನ್ನು ಕಂಡು ಕೋಗಿಲೆಗಳು ದೀರ್ಘವಾಗಿ ಹಾಡಿದವು. ಬಕವು ಮೌನವನ್ನು ತಾಳಿತು, ಆನೆಗಳು ಕೂಗಿದವು. ಗೂಬೆಗಳಿಗೆ ದೃಷ್ಟಿ ಭ್ರಮಣೆಯಾಯಿತು. ಹೀಗೆ ಒಟ್ಟು ಪ್ರಾಣಿ ಸಮೂಹವೇ ತಮ್ಮ ದುಃಖವನ್ನು ಪ್ರಕಟಿಸಿತು.

ಈ ಸಮಯದಲ್ಲಿ ಕುಳಿಂದನೆಂಬ ಸಾಮಂತ ರಾಜನು ಬೇಟೆಗಾಗಿ ಬಂದು ಅಲ್ಲಿ ಆ ಬಾಲಕನನ್ನು ಕಂಡು, ಕಡುಬಡವನು ನಿಧಿಯನ್ನು ಕಂಡಂತೆ ಹಿಗ್ಗಿದನು. ಆತನಿಗೆ ಮಕ್ಕಳಿರಲಿಲ್ಲ. ಆ ಮಗುವನ್ನು ಅರಮನೆಗೆ ಕರೆತಂದು ಪತ್ನಿಗೆ ತೋರಿ ಅಮಿತಾನಂದ ಪಟ್ಟನು. ಚಂದ್ರನನ್ನು ಹಾಸ್ಯಮಾಡುತ್ತಿರುವನೋ ಎಂಬಂತೆ ಕಾಣುವ ಸುಂದರ ಮುಖವುಳ್ಳ ಆ ಬಾಲಕನಿಗೆ ಚಂದ್ರಹಾಸ ಎಂದು ಶಾಸ್ತ್ರೋಕ್ತವಾಗಿ ಹೆಸರಿಟ್ಟು ಅಕ್ಕರೆಯಿಂದ ಸಾಕುತ್ತಿದ್ದರು. ಚಂದ್ರಹಾಸನು ಕ್ರಮೇಣ ಬೆಳೆದು ಸರ್ವವಿದ್ಯಾಪಾರಂಗತನಾದನು. ಕುಳಿಂದನು ಮುದಿತನದಿಂದಾಗಿ ರಾಜ್ಯ ಭಾರವನ್ನು ಚಂದ್ರಹಾಸನಿಗೆ ವಹಿಸಿದನು. ಚಂದ್ರಹಾಸನ ದೈವ ಭಕ್ತಿ, ಸತ್ಯಸಂಧತೆಯಿಂದಾಗಿ ರಾಜ್ಯ ಸುಭಿಕ್ಷವಾಗಿತ್ತು.

ಹೀಗಿರುವಾಗ ಕುಳಿಂದನು ಸಾಕುಮಗ ಚಂದ್ರಹಾಸನನ್ನು ಕುರಿತು "ಮಗು! ನಾವು ಕುಂತಳ ನಗರದ ಅರಸನಿಗೆ ಸಾಮಂತರು. ಆ ರಾಜ್ಯದ ಮಂತ್ರಿ ದುಷ್ಟಬುದ್ಧಿಗೆ ಕಪ್ಪವನ್ನು, ಗಾಲವನಿಗೆ ಗುರುದಕ್ಷಿಣೆ ಸಲ್ಲಿಸ ಬೇಕು. ಜಾಗ್ರತೆ ಸಲ್ಲಿಸಿ ಬಿಡು" ಎಂದನು.

ತಂದೆಯ ಮಾತಿನಂತೆ ಚಂದ್ರಹಾಸನು ಕಪ್ಪಕಾಣಿಕೆಯನ್ನು ದೂತರ ಮೂಲಕ ಕೊಟ್ಟು ಕಳುಹಿಸಿದನು. ಆ ದೂತರು ಅಂದು ಏಕಾದಶಿಯಾದ ಕಾರಣ ಸ್ನಾನಮಾಡಿ ಶುಚಿರ್ಭೂತರಾಗಿ ಕೊರಳಲ್ಲಿ ತುಳಸಿಮಾಲೆ ಧರಿಸಿ ಹೊರಟರು. ಇದನ್ನು ಗಮನಿಸಿದ ಮಂತ್ರಿ "ಎಲೈ ದೂತರಿರಾ, ಇದೇನು ಸಂಜೆ ಸಮಯದಲ್ಲಿ ಸ್ನಾನಮಾಡಿ ಬಂದಿದ್ದೀರಿ? ಕುಳಿಂದನು ಕ್ಷೇಮವೇ?" ಎಂದು ಕೇಳಿದನು. ಆಗ ದೂತರು "ಏಕಾದಶಿ ಪ್ರಯುಕ್ತ ಸ್ನಾನ ಮಾಡಿದ್ದೇವೆ, ಕುಳಿಂದನು ಕ್ಷೇಮವಾಗಿರುವನು. ಅವನ ಮಗ ಚಂದ್ರಹಾಸ ಮಹಾನುಭಾವ. ಅವನೇ ಈ ಕಾಣಿಕೆ ಸಲ್ಲಿಸಿ ಬರಲು ಕಳುಹಿಸಿರುವನು" ಎಂದರು. ದುಷ್ಟಬುದ್ಧಿಗೆ ಆಶ್ಚರ್ಯವಾಯಿತು. ಮಕ್ಕಳಿಲ್ಲದ ಕುಳಿಂದನಿಗೆ ಮಗನೆಲ್ಲಿ ಬಂದ? ಎಂಬ ಸಮಸ್ಯೆ ಉಂಟಾಯಿತು. ಅವನು ಕುತೂಹಲದಿಂದ ಚಾರರನ್ನು ಪ್ರಶ್ನಿಸಿ ನಿಜ ಸಂಗತಿ ತಿಳಿದುಕೊಂಡನು.

ತಂತ್ರ ನಿಪುಣನಾದ ದುಷ್ಟಬುದ್ಧಿ ಚಂದ್ರಹಾಸನು ಮತ್ತಾರು ಅಲ್ಲ ತಾನೂ ಕಟುಕರಿಗೆ ಒಪ್ಪಿಸಿದ್ದ ಮಗುವೇ ಆಗಿರಬೇಕೆಂದು ಊಹಿಸಿದನು. ಅದನ್ನು ಪರಿಶೀಲಿಸಲು ಕುಳಿಂದನ ರಾಜ್ಯಕ್ಕೆ ಬಂದನು. ಕುಳಿಂದನು ಮಂತ್ರಿಗೆ ತಕ್ಕ ರಾಜಮರ್ಯಾದೆ ಮಾಡಿದನು. ರಾಜ ಲಕ್ಷಣದಿಂದ ಕೂಡಿದ್ದ ಮನ್ಮಥನಂತಿದ್ದ ಚಂದ್ರಹಾಸನನ್ನು ಕಂಡು ಹೊಟ್ಟೆಯುರಿ ಭುಗಿಲ್ಲನೆ ಎದ್ದಿತು. ಆದರೂ ಸಂತೋಷವನ್ನು ನಟಿಸಿದ.

ವಿಪ್ರರ ಮಾತು ಎಂದು ಸುಳ್ಳಾಗುವುದಿಲ್ಲವೆಂದು ತಿಳಿದು ಚಂದ್ರಹಾಸನ ನಿರ್ಮೂಲನಕ್ಕೆ ಪ್ರಯತ್ನ ಯೋಚಿಸಿ ತನ್ನ ಮಗನಿಗೆ ರಹಸ್ಯ ಪತ್ರ ಬರೆದು ಅದನ್ನು ತನ್ನ ಮಗ ಮದನನಿಗೆ ಸೇರಿಸಬೇಕೆಂದು, ಮುದ್ರೆಯೊತ್ತಿದ್ದ ಪತ್ರವನ್ನು ಚಂದ್ರಹಾಸನಿಗೆ ಕೊಟ್ಟು ತಾನೇ ಹೋಗುವಂತೆ ತಿಳಿಸಿದನು. ಚಂದ್ರಹಾಸನು ತಂದೆ ತಾಯಿಂದಿರ ಆಶೀರ್ವಾದ ಪಡೆದು ಹೊರಟ.

ಚಂದ್ರಹಾಸನು ಹರಿನಾಮ ಸ್ಮರಣೆ ಮಾಡುತ್ತ ಶೀಘ್ರವಾಗಿ ಕುಂತಳ ಪುರಕ್ಕೆ ಬಂದು ನಗರದ ಹೊರವಲಯದಲ್ಲಿದ್ದ ಉದ್ಯಾನವನದಲ್ಲಿ ಊಟಮಾಡಿ ವಿಶ್ರಮಿಸುವ ಸಲುವಾಗಿ ಮರದ ಕೆಳಗೆ ಹುಲ್ಲಿನ ಮೇಲೆ ಮಲಗಿದನು

ಆ ವೇಳೆಗೆ ಸರಿಯಾಗಿ ದುಷ್ಟಬುದ್ಧಿಯ ಮಗಳು ವಿಷಯೆ ತನ್ನ ಸಖಿಯರೊಡನೆ ಗೂಡಿ ವಿಹಾರಕ್ಕೆಂದು ಬಂದು ಅಲ್ಲಿ ಮಲಗಿರುವ ಚಂದ್ರಹಾಸನನ್ನು ಕಂಡು, ಬಳಿ ಬಂದಳು. ಆತನ ರೂಪಲಾವಣ್ಯಗಳಿಗೆ ಮಾರು ಹೋಗಿ ಯಾರೂ ಇಲ್ಲದಿರುವುದನ್ನು ಕಂಡು ಆತನ ಪೀತಾಂಬರದ ಸೆರಗಿನ ತುದಿಯಲ್ಲಿದ್ದ ಮುದ್ರೆಯ ಕಾಗದ ಕಂಡು ಮೆಲ್ಲನೆ ಕಾಗದವನ್ನು ಕೈಗೆ ತೆಗೆದುಕೊಂಡು ನೋಡಿದಳು. ಅದರ ಒಕ್ಕಣೆ ಹೀಗಿತ್ತು. "ಸಚಿವ ಶಿರೋಮಣಿಯಾದ ದುಷ್ಟಬುದ್ಧಿ ತನ್ನ ಮಗನಾದ ಮದನನಿಗೆ ಆಶೀರ್ವದಿಸಿ ಬೆಸಸಿರುವ ಕಾರ್ಯವೆಂದರೆ – ಈ ಪತ್ರ ತರುವ ಚಂದ್ರಹಾಸನು ನಮಗೆ ಮಹಾಹಿತನು ಅಲ್ಲದೆ ನಮ್ಮ ರಾಜ್ಯಕ್ಕೆ ದೊರೆಯಾಗುವ ಸಂಭವವುಳ್ಳವನು ಇವನ್ನು ಇನ್ನು ಮುಂದೆ ಮಹಾಮಿತ್ರನಾಗುವನೆಂದು ಇವನನ್ನು ನಿನ್ನ ಬಳಿಗೆ ಕಳುಹಿಸಿರುವೆ. ಇದನ್ನು ಚೆನ್ನಾಗಿ ಅರ್ಥಮಾಡಿಕೊಂಡು ಕಾಲಹರಣ ಮಾಡದೆ ಇವನು ಮೋಹಿಸುವಂತೆ ವಿಷವ ಕೊಡುವುದು ಇದರಿಂದ ನಮಗೆ ಉತ್ತರೋತ್ತರ ಶ್ರೇಯೋಭಿವೃದ್ಧಿಯಾಗುವುದು"–ಎಂದಿತ್ತು.

ಮಂತ್ರಿಯ ಮಗಳಾದ ವಿಷಯೆಯು ಸರಿಯಾಗಿ ಅರ್ಥ ಗ್ರಹಿಸದೆ ತನ್ನ ತಂದೆ ತನಗೆ ಅಪರೂಪನಾದ ವರನನ್ನೇ ನೋಡಿರುವನೆಂದು ಅತ್ಯಾನಂದದಿಂದ ತನ್ನ ತಂದೆ ಆತುರದಲ್ಲಿ ಪ್ರಮಾದದಿಂದ "ವಿಷವ" ಕೊಡುವುದು ಎಂದು ಬರೆದಿದ್ದಾನೆ. ಇದರಿಂದ ವಿಪರೀತ ಅರ್ಥ ಬರುವುದೆಂದು ತಿಳಿದು 'ವಿಷವ' ಎಂಬುದನ್ನು 'ವಿಷಯೆ' ಎಂದು ತಿದ್ದಿ ಕಾಗದವನ್ನು ಹಾಗೇ ಇಟ್ಟು, ತನ್ನ ಸಖಿಯರಿದ್ದಲ್ಲಿಗೆ ಬಂದುಬಿಟ್ಟಳು.

ಇತ್ತ ಚಂದ್ರಹಾಸನು ಎದ್ದು ಮುಖ ತೊಳೆದು ಕುಂತಳವನ್ನು ಪ್ರವೇಶಿಸಿದ ಕೂಡಲೆ ಶುಭ ಶಕುನಗಳಾದವು. ಕಳಸ ಕನ್ನಡಿಗಳನ್ನು ಹಿಡಿದು ಮುತ್ತೈದೆ

ಯಾರು ಎದುರಿಗೆ ಬಂದರು. ಚಂದ್ರಹಾಸನು ರಾಜನ ಆಸ್ಥಾನಕ್ಕೆ ಹೊರಟು ಅಲ್ಲಿಂದ ಬೀಳ್ಕೊಂಡು ಮಂತ್ರಿಯ ಮನೆಗೆ ಬಂದನು.

ಹೀಗೆ ಬಂದ ಅತಿಥಿಯನ್ನು ಮಂತ್ರಿಕುಮಾರನು ಉಪಚರಿಸಿದ ಮೇಲೆ ಪತ್ರವನ್ನು ನೋಡಿ ತಿದ್ದಿ ಬರೆದ ಅಕ್ಷರದ ಗುರುತು ಹಿಡಿಯದೆ ತನ್ನ ತಂಗಿಯನ್ನು ಕೊಟ್ಟು ವಿವಾಹಮಾಡಿದನು. ಅನಂತರ ದುಷ್ಟಬುದ್ಧಿ ತನ್ನ ಮಗ ಏನು ಮಾಡಿದನೋ ಎಂದು ರಾಜ್ಯಕ್ಕೆ ಬಂದನು. ನಡೆದ ವಿಷಯ ಕಂಡು ಬಹಳ ವ್ಯಥೆಪಟ್ಟನು. ಅವನಿಗೂ ತಿದ್ದಿದ ಗುರುತು ಹತ್ತಲಿಲ್ಲ. ಚಂದ್ರಹಾಸನು ತನಗೆ ಅಳಿಯನಾದರೂ ಮತ್ಸರ ತಪ್ಪಲಿಲ್ಲ. ಕುಂತಳ ರಾಜ್ಯ ತನ್ನ ಮಗನಿಗೆ ಸಿಕ್ಕದೇ ಹೋಗುವುದೆಂಬ ಹೊಟ್ಟೆಯುರಿ ಹೆಚ್ಚಿತು. ತನ್ನ ಮಗಳು ವಿಧವೆಯಾದರೂ ಸರಿ, ಚಂದ್ರಹಾಸನನ್ನು ಕೊಲ್ಲಿಸಬೇಕೆಂದು ಒಬ್ಬನೇ ಹೋಗಿ ಕಾಳಿಕಾದೇವಿಯನ್ನು ಪೂಜಿಸಿ ಬರಬೇಕೆಂದು ಆದೇಶ ನೀಡಿದನು. ಅದೇ ಕಾಲಕ್ಕೆ ಅತ್ಯಂತ ಗೋಪ್ಯವಾಗಿ ಕಟುಕರನ್ನು ಕಳುಹಿಸಿ "ಪೂಜಾದ್ರವ್ಯಗಳೊಡನೆ ಒಬ್ಬನು ಬರುವನು. ಅವನನ್ನು ಯಾರೆಂದು ವಿಚಾರಿಸದೆ ಕೊಂದು ಬಿಡಿ" ಎಂದು ಆಜ್ಞಾಪಿಸಿದನು. ಯಾವ ಕಪಟವನ್ನು ಅರಿಯದ ಚಂದ್ರಹಾಸನು ಪೂಜಾದ್ರವ್ಯಗಳೊಡನೆ ಕಾಳಿಕಾ ಮಂದಿರಕ್ಕೆ ಹೊರಟನು.

ಕುಂತಲೇಶ್ವರನು ತನ್ನ 'ಅವಸಾನಕಾಲ ಸಮೀಪವಾಗುತ್ತಿದೆ, ರಾಜ್ಯಕ್ಕೆ ಉತ್ತರಾಧಿಕಾರಿಯನ್ನು ನೇಮಿಸಬೇಕು, ತನ್ನ ಮಗಳಿಗೆ ವಿವಾಹವನ್ನು ಮಾಡಬೇಕು' ಎಂದು ಯೋಚಿಸುತ್ತಿರುವಾಗ ಅವನ ಗುರುಗಳ ಅಪ್ಪಣೆಯಂತೆ ಚಂದ್ರಹಾಸನಿಗೆ ಮಗಳನ್ನು ಕೊಟ್ಟು ವಿವಾಹಮಾಡಿ ರಾಜ್ಯವಹಿಸಬೇಕೆಂದು ಯೋಚಿಸಿ ಚಂದ್ರಹಾಸನನ್ನು ಕರೆತರುವಂತೆ ಮಂತ್ರಿಯ ಮಗನಾದ ಮದನನನ್ನು ಕಳುಹಿಸಿದನು.

ಪೂಜಾದ್ರವ್ಯಗಳೊಂದಿಗೆ ಗುಡಿಗೆ ಹೋಗುತ್ತಿದ್ದ ಚಂದ್ರಹಾಸನನ್ನು ಕಂಡು ಮದನನು ಚಂದ್ರಹಾಸನನ್ನು ರಾಜರ ಆಸ್ಥಾನಕ್ಕೆ ಹೋಗುವಂತೆ ತಿಳಿಸಿ, ತಾನು ಪೂಜಾ ದ್ರವ್ಯಗಳೊಂದಿಗೆ ಗುಡಿಗೆ ಹೊರಟನು. ಚಂದ್ರಹಾಸನು ಅರಮನೆಗೆ ಬಂದ ತಕ್ಷಣ ಕುಂತಳರಾಜನು ಶಾಸ್ತ್ರೋಕ್ತವಾಗಿ ತನ್ನ ಮಗಳನ್ನು ವಿವಾಹಮಾಡಿ ರಾಜ್ಯವನ್ನು ವಹಿಸಿಕೊಟ್ಟನು.

ಇತ್ತ ಕಾಳಿಕಾ ದೇವಾಲಯದಲ್ಲಿ ಮಂತ್ರಿ ನೇಮಿಸಿದ್ದ ಕಟುಕರು ಮದನನ ತಲೆ ಕಡಿದು ಬಿಟ್ಟರು. ಚಂದ್ರಹಾಸನು ಈ ವೇಳೆಗೆ ಸತ್ತಿರಬಹುದೆಂದು ಮಂತ್ರಿ ಸಂತೋಷಿಸುತ್ತಿದ್ದ ವೇಳೆಯಲ್ಲಿ ತನ್ನ ಮನೆಯ ಮುಂದೆ ರಾಜೋಚಿತವಾದ ಮೆರವಣಿಗೆಯನ್ನು ಕಂಡು ಏನೋ ಅನರ್ಥವಾಗಿದೆಯೆಂದು ಭಾವಿಸಿ ದೇವಾಲಯದ ಕಡೆ ಹೊರಟನು. ಅಲ್ಲಿ ನಡೆದ ವಿಷಯ ತಿಳಿದು ದುಃಖದಿಂದ ತತ್ತರಿಸಿದನು. ಮಗನ ಶರೀರವನ್ನು ನೋಡಿ ಮಿತಿಮೀರಿದ ದುಃಖದಿಂದ ಅಲ್ಲಿದ್ದ ಕಲ್ಲು ಕಂಬಕ್ಕೆ ತಲೆ ಹೊಡೆದುಕೊಂಡು ಅಸು ನೀಗಿದನು.

ಮರುದಿನ ಬೆಳಿಗ್ಗೆ ದೇವಾಲಯದ ಪೂಜಾರಿ ಬಂದು ತಂದೆ, ಮಗ ಸತ್ತು ಬಿದ್ದಿರುವುದು ಕಂಡು ಆ ವಿಷಯವನ್ನು ಚಂದ್ರಹಾಸನಿಗೆ ತಿಳಿಸಿದನು. ಅದನ್ನು ಕೇಳಿ ದೇವಾಲಯಕ್ಕೆ ಹೋಗಿ ಅಲ್ಲಿ ಮಾವ, ಭಾವಮೈದುನರ ರುಂಡಮುಂಡಗಳನ್ನು ಕಂಡು ತನ್ನ ಪಟ್ಟಗತ್ತಿಯನ್ನು ಹಿಡಿದು ಕಾಳಿಕಾ ದೇವಿಯನ್ನು ಕುರಿತು, "ಹೇ ಜಗದಂಬೇ! ದೀನನಾದ ನನ್ನನ್ನು ಅನುಗ್ರಹಿಸು. ನಾನು ಮಾಡಿರುವ ಅಪರಾಧವಾದರೂ ಏನು? ನೀನು ಅವರನ್ನು ಈಗ ಬದುಕಿಸಿಕೊಡು. ಇಲ್ಲವೇ ನನ್ನ ಈ ಶರೀರವನ್ನು ಈ ಅಗ್ನಿಕುಂಡಕ್ಕೆ ಹಾಕಿ ಬಲಿಕೊಟ್ಟು ಮುಕ್ತಿ ಪಡೆಯುವೆನು" ಎಂದು ತನ್ನ ಕತ್ತನ್ನು ತಾನೇ ಕಡಿದು ಹಾಕಿಕೊಳ್ಳಲು ಸಿದ್ಧನಾದನು. ಆಗ ಕಾಳಿಕಾದೇವಿಯು ಪ್ರತ್ಯಕ್ಷಳಾಗಿ, "ಮಗೂ, ಚಂದ್ರಹಾಸ! ನಿನ್ನ ಭಕ್ತಿಗೆ ಮೆಚ್ಚಿದೆ, ನಿನ್ನ ದೈವಭಕ್ತಿ ಅನುಪಮವಾದುದು. ಈ ಆತ್ಮಹತ್ಯೆಯನ್ನು ಸಾಕುಮಾಡು. ನಿನ್ನ ಮಾವ ದುಷ್ಟಬುದ್ಧಿ ಕುತಂತ್ರಮಾಡಿ ಅನ್ನ ಮಗನ ಹಾಗೂ ತನ್ನ ಸಾವಿಗೆ ಕಾರಣನಾದ. ನಿನಗೆ ಎರಡು ವರಗಳನ್ನು ಕೊಡುವೆ. ಏನುಬೇಕೋ ಕೇಳಿಕೊ" ಎಂದಳು.

ಚಂದ್ರಹಾಸನು ಭಕ್ತಿಯುತನಾಗಿ ಜಗನ್ಮಾತೆಗೆ ನಮಸ್ಕರಿಸಿ "ಮಾತೆ! ಮೊದಲನೆಯದಾಗಿ ಜನ್ಮಜನ್ಮಗಳಲ್ಲೂ ನಿನ್ನ ಪದಚರಣಗಳಲ್ಲಿ ಭಕ್ತಿಯು ಶಾಶ್ವತವಾಗಿರುವಂತೆ ಅನುಗ್ರಹಿಸು. ಎರಡನೆಯದಾಗಿ ಈ ನನ್ನ ಮಾವನನ್ನೂ ಭಾವಮೈದುನನನ್ನೂ ಬದುಕಿಸಿಕೊಡು" ಎಂದು ದೇವಿಯ ಪಾದಗಳಿಗೆ ಅಡ್ಡಬಿದ್ದನು. ದೇವಿಯು "ತಥಾಸ್ತು" ಎಂದು ಹೇಳಿ ಅಂತರ್ಧಾನಳಾದಳು. ಮದನನೂ, ದುಷ್ಟಬುದ್ಧಿಯೂ ನಿದ್ದೆಯಿಂದ ಎಚ್ಚರವಾದಂತೆ ಎದ್ದು ಕುಳಿತರು ಎಲ್ಲರೂ ಸಂತೋಷದಿಂದ ಅವರವರ ಮನೆಗಳಿಗೆ ಹೋದರು.

ಹೀಗೆ ಚಂದ್ರಹಾಸನು ಧರ್ಮನಿರತನಾಗಿ, ಸತ್ಯ ಸಂಧತೆಯಿಂದ ರಾಜ್ಯಭಾರಮಾಡಿದನು. ತನ್ನಗಿಂತಲೂ ಮಿಗಿಲಾದ ಶೂರರೂ, ದೈವಭಕ್ತರೂ ಆದ ಮಕರಧ್ವಜ, ಪದ್ಮಾಕ್ಷರೆಂಬ ಇಬ್ಬರು ಮಕ್ಕಳನ್ನು ಪಡೆದನು.

ಸಂಗ್ರಹ : ಜೈಮಿನೀಭಾರತ ವಚನಚಂದ್ರಿಕೆ.

---

# ಗ್ರಂಥ ಪ್ರಕಾಶನ ಸಹಾಯಧನ

ಧಾರ್ಮಿಕ ಪುಸ್ತಕ ಪ್ರಕಾಶನದಲ್ಲಿ ಬರಹಗಾರರಿಗೆ ತಿ ತಿ. ದೇ. ಆರ್ಥಿಕ ನೆರವು ನೀಡುವ ಬರಹಗಾರರ "ಗ್ರಂಥಪ್ರಕಾಶನ ಸಹಾಯಧನಯೋಜನೆ" ಈ ವರ್ಷ (1981) ಸುಮಾರು 400 ಕ್ಕೂ ಮಿಕ್ಕಂತೆ ಪುಸ್ತಕಗಳಿಗಾಗಿ ನೆರವು ನೀಡಿದೆ ಕೆಳಗೆ ನೆರವುಪಡೆದ ಕನ್ನಡ, ಆಂಗ್ಲ, ಹಿಂದಿ, ಸಂಸ್ಕೃತ, ಕೃತಿಗಳ ಪಟ್ಟಿಯನ್ನು ಕೊಡಲಾಗಿದೆ. ಈ ಪಟ್ಟಿಯಲ್ಲಿ ತೆಲುಗು, ತಮಿಳು, ಮಲಯಾಳಿ ಭಾಷಾಕೃತಿಗಳನ್ನು ಸೇರಿಸಿಲ್ಲ.

## ಕನ್ನಡ

1. ಬ್ರಹ್ಮಸೂತ್ರ ಭಾಷ್ಯ 1, 2,
2. ಶ್ರೀಮದ್ಭಾಗವತ 1, 2,
3. ಗೀತಾವಲೋಕನ.
4. ಶ್ರೀಮದ್ಭಾಗವತ 7ನೇ ಸ್ಕಂಧ
5. ಹರಿಭಜನಪದ್ಧತಿ.
6. ವೇದಾಂತ ಸಿದ್ಧಾಂತ.
7. ಭದ್ರಾಚಲ ರಾಮದಾಸ ಮೇಳವಮಾಲಿಕೆ.
8. ಬಾಲಮಹಾಭಾರತ 1, 2,
9. ಶ್ರೀಮದ್ ಸಂಗ್ರಹರಾಮಾಯಣ.
10. ಆಂಜನೇಯ ಸುಪ್ರಭಾತ.
11. ಶ್ರೀರಾಮಪಟ್ಟಾಭಿಷೇಕ.
12. ಶ್ರೀಚಕ್ರ ಪೂಜಾ.
13. ಎರಡು ಪ್ರವಚನಗಳು.
14. ಶ್ರೀಮದ್ಭಾಗವತ ಪ್ರದೀಪ ಯುಕ್ತಿ ಮಲ್ಲಿಕಾ 5, 6ನೇಭಾಗಗಳು.
15. ರಂಗರಾಜಸ್ತವ.
16. ದೇವತೆಗಳು ಹಬ್ಬಗಳು.
17. ಶ್ರೀವಾದಿರಾಜರು
18. ನಿವೇದನ
19. ಮಹಾಭಾರತ 1, 12, ನೇಭಾಗಗಳು.

## ಸಂಸ್ಕೃತ

1. ಋಗ್ಭಾಷ್ಯ ಟೀಕಾ ವಿವೃತ್ತಿ.
2. ದೇವೀಶತಕಂ.
3. ಪರಮತಭಂಗ.

## ಹಿಂದಿ

1. ಪೋತನಾಕೆ ಕಾವ್ಯಮೇ ಭಕ್ತಿತತ್ತ್ವ

## ಆಂಗ್ಲ

1. ಆಂಡಾಳ್ ತಿರುಪ್ಪಾವೈ.
2. ರಾಮಾನುಜ ದರ್ಶನ್.
3. ಅಯೋಧ್ಯಾ ಕಾಂಡ.
4. ಸ್ತೋತ್ರ ರತ್ನಂ.
5. ಕ್ವೆಸ್ಟ್, ಎಟರ್ನಲ್.
6. ಹಿಸ್ಟರಿ ಆಫ್ ತಿರುಪತಿ ತಿರುಮಲ ಆಫ್ ವೆಂಕಟೇಶ್ವರ
7. ಅರಣ್ಯಕಾಂಡ; ಕಿಷ್ಕಿಂದಾಕಾಂಡ.
8. ರಾಮದಾಸ್ ಆಫ್ ಭದ್ರಾಚಲಂ
9. ಶ್ರೀವೆಂಕಟೇಶ್ವರ, ವೇದಾಂತದೇಶಿಕ
10. ಲೇಪಾಕ್ಷಿ ಟೆಂಪಲ್.
11. ಫೈನಲ್ ಸ್ಟೆಪ್ ಟು ಗಾಡ್.
12. ಹಿಂದೂಯಿಸಂ ಇನ್ ಸ್ಪೇಸ್ ಏಜ್.
13. ಆತ್ಮಾಸ್ ಎಕ್ಸ್‌ಪರಿಮೆಂಟ್.
14. ಸುಂದರಕಾಂಡ.
15. ಎನ್ಸಿಯೆಂಟ್ ಇಂಡಿಯನ್ ಸೇಂಟ್ಸ್
16. ಗ್ಲಿಮಿಂಗ್ಸ್ ಫ್ರಂದಿ ಹಿಂದೂ ಥಾಟ್ ಆನ್ ಅಮ್ನೀಸಿಯೆಂಟ್.
17. ಶಂಕರ ಅಂಡ್ ಮಧ್ವ ಆನ್ ಈಶಾವಾಸ್ಯೋಪನಿಷದ್.
18. ಯುದ್ಧಕಾಂಡ
19. ಯದುನಂದನ
20. ಸಂಪೂರ್ಣ ಸುಂದರಕಾಂಡ.
21. ಶ್ರೀಮದ್ಭಾಗವತಂ.

Edited and Published on behalf of the T. T. Devastanams by K. Subba Rao, M. A., and Printed at T T D Press by M. Vijayakumar Reddy, Manager, T. T. D. Press, Tirupati - 517 501.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

| | |
|---|---|
| ವಿಶೇಷ ಪ್ರವೇಶ (ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸಂತಿಯಸಾಲಿನಲ್ಲಿ ಸೇರುವಿಕೆ) | ರೂ 25–00 |

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ[1] | ರೂ 400 |
| 2 | ಅಭಿಷೇಕ* | ರೂ 500 |
| 3. | ಗಂಬುರ* | ರೂ 300 |
| 4. | ಪುನುಗು* | ರೂ 200 |
| 5 | ಜಾಫ್ರಾ* | ರೂ 100 |
| 6 | ಕಸ್ತೂರಿ* | ರೂ 100 |
| 7 | ಸಹಸ್ರಕಲಶಾಭಿಷೇಕ | ರೂ 3000 |
| 8. | ತಿರುಪ್ಪಾವಡಾ[2] | ರೂ 6000 |
| 9 | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 10 | ಮುಕುರ ಮಂಟಪದಲ್ಲಿ ಡೋಲೋತ್ಸವ[2] | ರೂ 1500 |
| 11. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ[2] | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

| | |
|---|---|
| ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ | ರೂ 125 |
| ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ | ರೂ 100 |

1. ಆಮಂತ್ರಣೋತ್ಸವಕ್ಕ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ

2 ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ

ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

---

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ 75–00 |
| ಟಿ.ಬಿ ಸಿ ಒಳಗಿನ ಕಾಟೇಜುಗಳು | ,, | ರೂ 50–00 |
| ಎಸ್ ವಿ ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮಾಲೆಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್ ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ ಟಿ ಸಿ ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳ ಕೋಣೆ | ರೂ 12–00 |
| ನಾಲ್ಕು ,, | ರೂ 15–00 |
| ಒಂದು ,, | ರೂ 10–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 40–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 16–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

ಶ್ರೀ ವೆಂಕಟೇಶ್ವರ [illegible]

[illegible]

ಅತಿಶ್ರೇಷ್ಠ ಪರಂಪರೆ [illegible]

ದೃಢವಾದ ತಾತ್ವಿಕ ತಳಹದಿಯುಳ್ಳ ಹಿಂದೂಧರ್ಮವು [illegible]

ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ

**ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.**

ಓಂ ಶ್ರೀ ವೆಂಕಟೇಶಾಯ ನಮಃ

ಓಂ ನಮೋ ಭಗವತೇ ವಾಸುದೇವಾಯ

ಓಂ ನಮೋ ನಾರಾಯಣಾಯ

ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**